# ಕೆಲವು ಹೊಸ ಪುಸ್ತಕಗಳು



| ಪುಸ್ತಕ | ಲೇಖಕ | | | |
|---|---|---|---|---|
| ಸ್ವಲ್ಪದ್ರಲ್ಲಿ ಸ್ವಾರಸ್ಯ | ಶ್ರೀರಂಗ | ೧ | ೦ | ೦ |
| ನಿರಾಹಾರ | ,, | ೦ | ೧೨ | ೦ |
| ಋಗ್ವೇದ ( ಕನ್ನಡ ಭಾಷಾಂತರ ) | ೧ನೇ ಮಂಡಲ | ೫ | ೦ | |
| ಶ್ರೀಮದ್ ಭಗವದ್ಗೀತೆ | ಸಾತವಳೇಕರ | ೧ | ೮ | |
| ಸನಾತನ ಧರ್ಮ | ,, | ೦ | ೯ | ೦ |
| ಕನ್ನಡ ನುಡಿಯ ಜೀವಾಳ | ಶಂ. ಬಾ. ಜೋಶಿ | ೩ | ೦ | ೦ |
| ಮದುವೆಯ ಗುರಿ | ವೀರಭದ್ರಪ್ಪನವರು | ೨ | ೪ | ೦ |
| ಮನೆಗೆ ಬಂದ ಮಹಾಲಕ್ಷ್ಮಿ | ತ. ರಾ. ಸು. | ೧ | ೦ | ೦ |
| ಜಗತ್ ಕಥಾವಲ್ಲರಿ ಭಾಗ ೨ | ಸಿದ್ಧವ್ವನಹಳ್ಳಿ | ೦ | ೧೨ | ೦ |
| ವಿಚಾರಮಂಜರಿ | ದ. ರಾ. ಬೇಂದ್ರೆ, | ಅಚ್ಚಿನಲ್ಲಿ | | |
| ರವೀಂದ್ರರ ವಚನಗಳೂ ಪ್ರಬಂಧಗಳೂ | ಪ್ರಲ್ಹಾದ ನರೇಗಲ್ಲ | ,, | | |
| ಜಾಗ್ರತಚೀನ | ಸಂಜಯ | ,, | | |
| ಶ್ರೀರಂಗ | ನೆರಂಗ | ೧ | ೮ | ೦ |
| ಜೇನು | ರಮಾನಂದ | ೦ | ೬ | ೦ |
| ಬಹಿಷ್ಕಾರ | ನೆರಂಗ | ೦ | ೬ | ೦ |
| ಶಾಪತ್ರಯ | ಜೋಕೆ | ೦ | ೬ | ೦ |
| ಕನ್ನಡಿ | ಅನಿರುದ್ಧ | ೦ | ೬ | ೦ |
| ಚಿಕ್ಕಂನಂಗಡಿ | ಕುಲಕರ್ಣಿ ರಾಮಚಂದ್ರ | ೦ | ೨ | ೦ |
| ೧೯೪೨ರ ಆಗಸ್ಟ ೯ರ ತರುವಾಯ | ಸಿದ್ಧವನಹಳ್ಳಿ | ೧ | ೦ | ೦ |
| ವಿನೋಬಾ ವಿಚಾರಲಹರಿ | ಎ. ಎ. ಶ್ರೀನಿವಾಸಮೂರ್ತಿ | ೨ | ೦ | ೦ |

**ಮನೋಹರ ಗ್ರಂಥ ಭಾಂಡಾರ, ಧಾರವಾಡ**

**ಕನ್ನಡ ಪುಸ್ತಕಾಲಯ, ಬೆಳಗಾಂವಿ**

ಲಲಿತ ಸಾಹಿತ್ಯಮಾಲೆಯ ೧೧ನೆಯ ಕುಡಿ

೨ನೆಯ ವರುಷದ ೫ನೆಯ ಕುಡಿ

# ಶೈಲಾಜಿ

(ಐದು ಏಕಾಂಕಗಳು)

ವಿವಿಧ ಲೇಖಕರು



ಫೆಬ್ರುವರಿ ೧೯೪೫ ✲ ಬೆಲೆ ೧—೪—೦

ಸಂಪಾದಕರು :

ಚುಳಕಿ ಗೋವಿಂದರಾಯರು

ಮಾರಾಟಗಾರರು :

ಮನೋಹರ ಗ್ರಂಥ ಭಾಂಡಾರ, ಧಾರವಾಡ.

ಕನ್ನಡ ಪುಸ್ತಕಾಲಯ, ಬೆಳಗಾಂವಿ

೬ನೆಯ ವರುಷದ ೭ನೆಯ ಕುಡಿ

# 'ಇಂದಿನ ಕರ್ನಾಟಕ'

ಸಂಪಾದಕರು :

**ಪ್ರೊ. ವಿ. ಕೃ. ಗೋಕಾಕ,** ಬಿ. ಎ. (ಆಕ್ಸಫರ್ಡ)

ಪ್ರಕಾಶಕರು
ದ. ಬಾ. ಕುಲಕರ್ಣಿ
ಮನೋಹರ ಗ್ರಂಥ ಭಾಂಡಾರ
ಧಾರವಾಡ.

ಮುದ್ರಕರು
ಎನ್. ಎಸ್. ಬೆಂಗೇರಿ
ವಿಜಯ ಮುದ್ರಾಲಯ
ಧಾರವಾಡ.

# ಬಿನ್ನಹ

ಈ 'ಶೈಲಾಜಿಕ್ಸ್' ಎಂಬ ಹೆಸರನ್ನು ಹೊತ್ತುಕೊಂಡ ಈ ಐದು **ಏಕಾಂಕಗಳ** ಸಂಗ್ರಹವೆ ನಮ್ಮ ಲಲಿತ ಸಾಹಿತ್ಯ ಮಾಲೆಯ ೨ನೆಯ ವರುಷದ ೫ನೆಯ ಕುಡಿಯು. ಇದನ್ನು ನಮ್ಮ ವಾಚಕರಿಗೆ ಕೊಡಲು ಹರುಷವೆನಿಸುತ್ತಿದೆ. ಸಕಾಲಕ್ಕೆ ಪುಸ್ತಕಗಳನ್ನು ಪ್ರಕಟಿಸುವ ಸಂಕಲ್ಪ ಮಾಡಿದ್ದರೂ ಈ ಕಾಲ ಎಲ್ಲಕ್ಕೂ ಅಭಾವದ ಕಾಲವಾಗಿದೆ. ಕಾಗದ ದೊರೆಯುವದಿಲ್ಲ. ಕಷ್ಟಪಟ್ಟು ಕಾಗದ ದೊರಕಿಸಿದರೂ ಮುದ್ರಾಲಯಗಳಲ್ಲಿ ಕೆಲಸಗಾರರಿಲ್ಲ. ಮೇಲಾಗಿ ಕಾಗದ ನಿಯಂತ್ರಣಾಜ್ಞೆ. ಅಂತೂ ಪ್ರಕಾಶನ ಕಾರ್ಯಕ್ಕೆ ಅನೇಕ ಅಡೆ-ತಡೆಗಳುಂಟಾಗಿವೆ. ಆದುದರಿಂದ ವಾಚಕರು ಇದೆಲ್ಲವನ್ನು ಗಮನಿಸಿ ಈ ತಡೆಯನ್ನು ಮನ್ನಿಸುವರೆಂದು ಆಶಿಸಿದ್ದೇವೆ.

ಈ ಐದು ಏಕಾಂಕ ನಾಟಕಗಳನ್ನು ಬರೆದು ಕೊಟ್ಟು ನಮ್ಮ ಲ. ಸಾ. ಮಾಲೆಯಲ್ಲಿ ಪ್ರಕಾಶನಗೊಳಿಸಲು ಅನುಮತಿಯನ್ನಿತ್ತಂಥ ಬರೆಹಗಾರರಿಗೆ ನಾವು ಎಂದಿಗೂ ಕೃತಜ್ಞರಾಗಿದ್ದೇವೆ. ಈ ಸಂಗ್ರಹವನ್ನು ಸಿದ್ಧಪಡಿಸಿ, ಇದನ್ನು ಪ್ರಕಟಗೊಳಿಸಲು ಹುರಿದುಂಬಿಸಿದಂಥ ನಮ್ಮ ಸ್ನೇಹಿತರಾದ ಶ್ರೀ. ಕಲಮದಾನಿ ಗುರುರಾಯರು, ಹುಬ್ಬಳ್ಳಿ ಇವರಿಗೆ ನಾವು ಆಭಾರಿಯಾಗಿದ್ದೇವೆ.

ಈಗ ಲ. ಸಾ. ಮಾಲೆಯ ಎರಡನೆಯ ವರುಷದಲ್ಲಿ ನಾವು ಐದು ಪುಸ್ತಕಗಳನ್ನು ಕೊಟ್ಟಿದ್ದೇವೆ. ಇನ್ನೊಂದು ಪುಸ್ತಕವನ್ನು ಪ್ರಕಟಿಸಿದರೆ ಈ ವರುಷದ ಎಲ್ಲ ಪುಸ್ತಕಗಳನ್ನು ಕೊಟ್ಟಂತಾಗುವದು. "ಇಂದಿನ ಕರ್ನಾಟಕ"ವೇ ಈ ವರ್ಷದ ಕೊನೆಯ ಪುಸ್ತಕ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಖ್ಯಾತಿಯನ್ನು ಪಡೆದಂಥ ಪ್ರೊ. ವಿ. ಕೃ. ಗೋಕಾಕ ಬಿ. ಎ. (ಆಕ್ಸಫರ್ಡ) ಇವರು ಈ "ಇಂದಿನ ಕರ್ನಾಟಕ"ವನ್ನು ಸಂಪಾದಿಸಿ ನಮ್ಮ ಮಾಲೆಯಲ್ಲಿ ಪ್ರಕಟಿಸಲು ದಯಪಾಲಿಸಲಿದ್ದಾರೆ.

ನಮ್ಮ ಲ. ಸಾ. ಮಾಲೆಯ ಮುಖಾಂತರ ನಾವು ಸಂಕಲ್ಪ ಮಾಡಿದ ಸಾಹಿತ್ಯ ಸೇವೆಯು ಮುಂದುವರಿಯುತ್ತ ಕನ್ನಡ ನುಡಿಯ ಬೆಡಗನ್ನು ಹೆಚ್ಚಿಸುತ್ತ ಸಾಗಿರುವದೆಂಬುದನ್ನು ಹೇಳಲು ಹರುಷವೆನಿಸುತ್ತಿದೆ. ಕನ್ನಡಿಗರ ಪ್ರೋತ್ಸಾಹನವು ನಮಗೆ ದೊರೆಕೀತೆಂದು ಆಶಿಸಿದ್ದೇವೆ.

—**ಸಂಪಾದಕರು**

# ಪರಿವಿಡಿ

# ಆತ—ಆಕೆ

## ದೃಶ್ಯ ೧

(ಆತನಿಗೆ ಇಪ್ಪತ್ತೈದು ವರ್ಷವಿರಬಹುದು. ಹೊಸ ಹರೆಯದ ಹುಮ್ಮಸ್ಸು. ಪ್ರಪಂಚವನ್ನೇ ಆಳುವೆನೆಂಬ ಹುಮ್ಮಸ್ಸಿದೆ ಮುಖದಲ್ಲಿ. ಆಕೆಗೆ ಹದಿನೇಳಿರಬಹುದು. ನೆಲೆ ಸಿಕ್ಕಿದರೆ ಸಾಕೆಂಬ ಎಳೆಬೇರಿನಂತಹ ಹೆಣ್ಣು. ಧೀರ ಗಂಡನಾಶ್ರಯದ ನಂಬಿಕೆ ಅವಳಿಗಿದೆ. ಅವರಿಬ್ಬರೂ ಲಗ್ನವಾಗಿ ಒಂದು ವರ್ಷವಾದರೂ ಇಬ್ಬರಿಗೂ ಮೊನ್ನೆ ಮೊನ್ನೆಯವರೆವಿಗೆ ಪತ್ರ ಪರಿಚಯ ಮಾತ್ರವಿತ್ತು. ಈಗ ಅವರು ಸಂಸಾರ ಹೂಡಿ, ಆಕೆ ಗಂಡನ ಮನೆಗೆ ಬಂದ ತೀರ ಹೊಸದರಲ್ಲಿ, ನಾವು ಆಕಸ್ಮಾತ್ ಅಲ್ಲಿಗೆ ಹೋಗಿ ಕದ್ದು ನೋಡಿದ ದೃಶ್ಯವಿದು. ಆತ ಖುರ್ಚಿಯ ಮೇಲೆ ಕುಳಿತಿದ್ದಾನೆ. ಸೂಜಿಗಲ್ಲಿನ ಕಡೆಗೆ ತಿರುಗುವ ಸೂಜಿಯಂತೆ ಅವಳ ಕಡೆ ತಿರುಗಿದ್ದಾನೆ. ಪಕ್ಕದಲ್ಲಿದ್ದ ಮೇಜಿನ ಬಳಿ ಒರಗಿ ನಿಂತು, ಒಂದು ಕೈಯನ್ನು ಮೇಜಿನ ಮೇಲೆ ತೇಲಿ ಬಿಟ್ಟು, ಆಕೆ ಇನ್ನೊಂದು ಕೈಯಿಂದ ಸೀರೆಯ ನೂಲೊಂದನ್ನು ಹಿಡಿದೆಳೆದಾಡುತ್ತಾ, ಕಾಲು ಬೆರಳಿನಿಂದ ನೆಲ ಕೆರೆಯುತ್ತಾ ಇದ್ದಾಳೆ. ನಾವು ಅವರಿಬ್ಬರ ಹೆಸರನ್ನು ಬೇಕೆಂದೇ ಪ್ರಕಟಿಸಿರುವುದಿಲ್ಲ. ಲಗ್ನವಾದ ಓದುಗರಿಗೆ ಅವರು ಯಾರೆಂದು ತಿಳಿಯಲು ಸೂಚನೆ ಕೊಡುತ್ತೇವೆ. ಆತ-ಆಕೆ ಇವರ ಬದಲು, ನಮ್ಮ ವಾಚಕ ದಂಪತಿಗಳು ನಮ್ಮ ಹೆಸರನ್ನೇ ಹಾಕಿಕೊಂಡು ಓದಿದಲ್ಲಿ ಹೆಚ್ಚು ತಪ್ಪಾಗದೆಂದು ನಮಗೆ ಭರವಸೆ ಇದೆ.)

**ಆತ:**— (ಅವಳ ಕಡೆ ಮತ್ತಷ್ಟು ಬಾಗಿ) ಏ, ಮಾತನಾಡುವುದೇ ಇಲ್ಲಾ. ನನ್ನ ಸಂಗಡ ಮಾತನಾಡುವುದಕ್ಕೆ ಇನ್ನೂ ನಾಚಿಕೆಯೆ ನಿನಗೆ? ಇವತ್ತು ನಿನ್ನ ಜತೆ ಮಾತನಾಡಬೇಕು ಅಂತ ರಜ ಸಹ ತೆಗೆದುಕೊಂಡು ಮನೆಯಲ್ಲೇ ಇದ್ದೇನೆ, ಕಚೇರಿಗೆ ಹೋಗುವುದರ ಬದಲು. ಮಾತಾಡ್ತೀಯಾ!

**ಆಕೆ:**— (ಲಜ್ಜಾಪೂರಿತಳಾಗಿ, ತಲೆಯನ್ನು ಇನ್ನೂ ತಗ್ಗಿಸಿ) ಏನು ಮಾತಾಡ್ಲೀ.

**ಆತ:**— ಏನು ಬೇಕಾದ್ರೂ ಮಾತಾಡು. ಈಗ ಮೂರು ನಾಲ್ಕು ದಿವಸಗಳಿಂದ, ನೀನು ನಮ್ಮ ಮನೆಗೆ ಬಂದಾಗಿನಿಂದ, ನಾನೇ ಮಾತಾಡ್ತಾ ಇದ್ದೀನಿ, ನೋಡು. ಹಾಗೇ, ನೀನೂ ಮಾತಾಡಬೇಕು. ನಾನು ನಿನ್ನಲ್ಲಿ ಎಷ್ಟು ಸಲಿಗೆಯಿಂದ ಮಾತನಾಡುತ್ತಿದ್ದೇನೋ, ನೀನೂ

ನನ್ನಲ್ಲಿ ಅಷ್ಟೇ ಸಲಿಗೆಯಿಂದ ನನ್ನ ಜತೆ ಮಾತನಾಡಬೇಕು. ಇನ್ನು ಮೇಲೆ ಹಾಗೆ ಮಾಡ್ತೀಯಾ?

**ಆಕೆ:**— ಹೂಂ.

**ಆತ:**— (ಅವಳನ್ನು ಮಾತನಾಡಿಸಲು ನೆವ) ಅಪ್ಪ ಒಳಗೆ ಏನು ಮಾಡ್ತಾ ಇದ್ದಾರೆ?

**ಆಕೆ:**— ನಿದ್ದೆ.

**ಆತ:**— (ಆಕೆಗೆ ಸಲಿಗೆ ಹೆಚ್ಚಾಗಲಿ ಎಂದು) ನಿನ್ನ ಸಾಮಾನುಗಳನ್ನೆಲ್ಲಾ ಇನ್ನೂ ನಡುಮನೆಯಲ್ಲೇ ಇಟ್ಟಿದ್ದೀಯ-ಲ್ಲಾ. ಅವುಗಳನ್ನೆಲ್ಲಾ ತರಿಸಿ ಇಲ್ಲೇ ಇಟ್ಟುಕೊ.

**ಆಕೆ:**— ಹೂಂ.

**ಆತ:**— (ಏನೋ ಗುಟ್ಟು ಹೇಳುವವನಂತೆ) ಇದು ಯಾರ ಕೋಣೆ ಗೊತ್ತೆ?

**ಆಕೆ:**— ಹೂಂ.

**ಆತ:**— ಹೇಳು ನೋಡೋಣ, ಯಾರದೂ ಅಂತ.

**ಆಕೆ:**— ('ನಿಮ್ಮದು' ಎಂತ ಸಂಬೋಧನೆ ಮಾಡಿ ಹೇಳಲಿಕ್ಕೂ ನಾಚಿಗೆ ಅವಳಿಗೆ, ಪಾಪ! ಅವನ ಕಡೆ ತಲೆ ತಿವಿದು ತೋರಿಸುತ್ತಾಳೆ ಆವನನ್ನು)

**ಆತ:**— (ಆಕೆ ಇಂಗಿತವನ್ನು ಅವನು ಅರ್ಥ ಮಾಡಿಕೊಳ್ಳುತ್ತಾನೆ. ಅವಳ ಬಾಯಿ ಬಿಡಿಸಬೇಕೆಂದು ಅವನಿಗೆ ಹಂಬಲ) ತಲೆ ತಿವಿದರೆ ತಿಳಿಯುತ್ತೇ?

**ಆಕೆ:**— (ಯತ್ನವಿಲ್ಲದೆ, ಆತನ ಹೆಸರನ್ನೇ ಹೇಳಿ ಬಿಟ್ಟವಳಂತೆ, ಮುಖ ಕೆಂಪೇರಿ) ನಿಮ್ಮದು.

**ಆತ:**— (ಆಪ್ತತೆಯಿಂದ) ನನ್ನೊಬ್ಬನದೇ ಅಲ್ಲ. ಅಷ್ಟೇಕೆ, ನನ್ನದೇ ಅಲ್ಲ ಅಂತ ಇಟ್ಕೊ. ನಿನ್ನದೇ ಈ ಕೊಠಡಿ. ನಿನ್ನ ಸಾಮಾನುಗಳನ್ನೆಲ್ಲಾ ಇಲ್ಲೇ ತರಿಸಿಟ್ಟುಕೊಂಡು, ಈ ಕೋಣೇನ ನಿನಗೆ ಹ್ಯಾಗೆ ಬೇಕೋ ಹಾಗೆ ಇಟ್ಟುಕೋ. ನಾನು ಇಲ್ಲಿಗೆ ಸುಮ್ಮನೆ ಹೋಗ್ತಾ ಬರ್ತಾ ಇರ್ತೀನೆ ಅಷ್ಟೆ, ಗೊತ್ತಾಯ್ತೇ.

**ಆಕೆ:**— ಹೂಂ.

**ಆತ:**— ನೋಡು, ಬೆಳಗಿನಿಂದ ನನ್ನ ಮಾತೇ ಆಡಿಸಿಲ್ಲ, ನೀನು. ಹತ್ತು ಹದಿನೈದು ಸಲ ಕಾದು ನೋಡಿದೆ, ಇಲ್ಲಿಗೆ ಬರ್ತೀಯೇನೋ ಅಂತ.

ನೀನು ಬರಲೇ ಇಲ್ಲ. ನಿನಗೆ ಕೆಲಸವಿದ್ದರೆ ಸರಿ. ಕೆಲಸ ಇಲ್ಲದಿದ್ದಾಗ ಆ ನಡುಮನೆ ಗೋಡೆಗೆ ಏಕೆ ಒರಗಿ ನಿಂತುಕೊಳ್ಳಬೇಕು, ದ್ವಾರ-ಪಾಲಕ ಇದ್ದ ಹಾಗೆ. ಇಲ್ಲಿಗೆ ಬಾ. ತಿಳೀತೇ ?

**ಆಕೆ** :— ಏನಾದ್ರೂ ಅಂದ್ರೆ.

**ಆತ** :— ಯಾರು ಏನು ಅಂತಾರೆ? ಅಮ್ಮನೇ? ಮನೆಯುವರೇ? ಯಾರು ಏನೂ ಅನ್ನುವುದಿಲ್ಲ. ನಿಮ್ಮ ಅಕ್ಕ ಇದ್ದಾರಲ್ಲ, ಬೆಂಗಳೂರಲ್ಲಿ; ಅವರು ಅವರ ಗಂಡ ಇಬ್ಬರೂ ಜತೇಲಿ ಕೂತುಕೊಂಡು ಮಾತಾ-ಡುತ್ತಾ ಇರೋದಿಲ್ಲೆ, ಮೂರುಹೊತ್ತೂ. ಗಂಡ ಹೆಂಡತಿ ಆಗೋ-ದೇಕೆ? ಒಟ್ಟಿಗೆ ಇರಬೇಕು ಅಂತ ಅಲ್ವೆ ? ಯಾರು ಏನೂ ಅನ್ನುವ ದಿಲ್ಲ ಗೊತ್ತಾಯ್ತೆ ?

**ಆಕೆ** :— ಹೂಂ.

**ಆತ** :— ನಿನ್ನೆ ಮಧ್ಯಾನ್ಹ ಊಟ ಆದ ಮೇಲೆ ಅಡಿಗೆ ಮನೆಯಲ್ಲಿ ಆ ಹರಕು ಚಾಪೆಯ ಮೇಲೆ ತೂಕಡಿಸುತ್ತಾ ಯಾಕೆ ಕೂತಿದ್ದಿ. ಇಲ್ಲಿಗೆ ಬಂದು ಮಂಚದ ಮೇಲೆ ಮಲಗಿಕೊಳ್ಳಬೇಕಾಗಿತ್ತು. ನಿನ್ನ ಸಾಮಾನು ಗಳನ್ನು ಇಲ್ಲಿಗೆ ಯಾವಾಗ ತರಿಸಿಟ್ಟುಕೊಳ್ಳುತ್ತೀ?

**ಆಕೆ** :— ನೀವೇ— (ಎಂದು ಸೂಚಿಸಿ ಸುಮ್ಮನಾಗುವಳು)

**ಆತ** :— ಹಾಗೆ ಆಗ್ಲಿ. ಸಂಜೆ ಆಳು ಬಂದ ಕೂಡಲೆ ನಾನು ಅವನಿಗೆ ಹೇಳಿ ನಿನ್ನ ಸಾಮಾನುಗಳನ್ನು ಇಲ್ಲಿಗೆ ತರಿಸಿಡುತ್ತೇನೆ. ಆವಾಗ ನಿನಗೆ ಇಲ್ಲಿಗೆ ಸಲೀಸಾಗಿ ಬರುವುದಕ್ಕೆ ಸರಿ ಹೋಗುತ್ತೆ. ಆ ಮೇಲೆ ಇನ್ನೊಂದು ವಿಷಯ ನೋಡು. ಎರಡು ಹೊತ್ತು ನೀನು ಕಾಫೀನ ಕೋಮಲಾನ ಕೈಲಿ ಏಕೆ ಕಳುಹಿಸುತ್ತೀಯಾ? ನೀನೆ ತಂದು ಕೊಡು ನನಗೆ ತಿಳೀತೆ.

**ಆಕೆ** :— ಆಗ್ಲಿ.

**ಆತ** :— (ಅವನಿಗೆ ಏನೋ ತಿಳಿದು) ಅಲ್ಲ; ನನ್ನ ಜತೆ ಮಾತಾಡಲೀ ಅಂತ ನಿನ್ನ ಈ ಕೋಣೆಗೆ ಕರೆದುಕೊಂಡು ಬಂದರೆ ನೀನೇನು ಮಾತಾಡು ತ್ತಾನೆ ಇಲ್ಲವಲ್ಲ! ನಾನೇ ಎಲ್ಲಾ ಮಾತಾಡುತ್ತಾ ಇರೋದು. ನಿನ್ನ ಮಾತು ಕೇಳೋಣ ಅಂತ ರಜ ತೆಗೆದುಕೊಂಡಿದ್ದಕ್ಕೆ ಇದೇನೆ ಫಲ!

ಹಾಡಂತೂ ಬರೋದಿಲ್ಲ, ಹಾಡು ಕೇಳೋಣ ಅಂದ್ರೆ. ಮಾತಾಡೋದೂ ಬರೋದಿಲ್ಲ ಮಾತು ಕೇಳೋಣ ಅಂದ್ರೆ!

**ಆಕೆ** :— (ಬಹಳ ಮಾತಾಡಿ ಬಿಟ್ಟವಳಂತೆ) ಏನ್ಮಾತಾಡ್ಲಿ.

**ಆತ** :— ಏನಾದ್ರೂ. ನಿಮ್ಮೂರಿನ ವಿಷಯ ಹೇಳು. ನಿಮ್ಮ ಸಂಬಂಧಿಕರ ವಿಷಯ ಮಾತಾಡು. ನಿಮ್ಮ ಮನೆಯವರ ವಿಷಯ ತಿಳಿಸು. ನಿನ್ನ ವಿಷಯ ಮೊದಲಿಂದ ನನಗೆ ಎಲ್ಲಾ ಪರಿಚಯ ಮಾಡಿಕೊಡು. ಮಾತಾಡೋಕೇನು, ಬೇಕಾದಷ್ಟಿದೆ.

**ಆಕೆ** :— ಕೇಳಿದ್ರೆ ಹೇಳ್ತೀನೆ.

**ಆತ** :— ಭೇಷ್! ಅಷ್ಟಾದರೂ ಮಾಡು. ನೀನು ದೊಡ್ಡ ಉಪನ್ಯಾಸ ಕೊಟ್ಟ ಹಾಗೇ ಆಗುತ್ತೆ. ನೀನು ಹೈಸ್ಕೂಲಿಗೆ ಹೋಗುತ್ತಾ ಇದ್ದೆಲ್ಲ, ಸ್ಕೂಲು ನಿಮ್ಮ ಮನೆಗೆ ಹತ್ತಿರವೋ, ದೂರವೋ ?

**ಆಕೆ** :— ದೂರ.

**ಆತ** :— ನಡೆದುಕೊಂಡು ಹೋಗುತ್ತಿದ್ದೆಯಾ ?

**ಆಕೆ** :— ಇಲ್ಲ.

**ಆತ** :— ಓಹೋ, ಬಸ್ಸಿನಲ್ಲಿ ಹೋಗ್ತಾ ಇದ್ದೇನೊ, ಸ್ಕೂಲಿನ ಬಸ್ಸಿನಲ್ಲಿ?

**ಆಕೆ** :— ಇಲ್ಲ.

**ಆತ** :— ಹಾಗಿದ್ದರೆ ಟಾಂಗಾದಲ್ಲಿ ಹೋಗುತ್ತಿದ್ದೋ ?

**ಆಕೆ** :— ಹೂಂ

**ಆತ** :— ಟಾಂಗಾದವನಿಗೆ ಬಾಡಿಗೆ ತಿಂಗಳಿಗೆ ಗೊತ್ತು ಮಾಡಿದ್ದಿರಾ? ದಿನಂಪ್ರತಿನೋ?

**ಆಕೆ** :— ತಿಂಗಳಿಗೆ.

**ಆತ** :— ಎಷ್ಟು ಗೊತ್ತು ಮಾಡಿದ್ರು.

**ಆಕೆ** :— ಗೊತ್ತಿಲ್ಲ.

**ಆತ** :— (ಆ ಹಾದಿಯಲ್ಲಿ ಅಡ್ಡಗೋಡೆ ಸಿಕ್ಕಿದ್ದರಿಂದ, ಮಾತು ಬದಲಾಯಿಸಿ) ನಾನು ಕಾಗದಗಳನ್ನು ಬರೆಯುತ್ತಿದ್ದೆನಲ್ಲ, ನೀನೇ ಒಡೆಯುತ್ತಿದ್ದೋ?

**ಆಕೆ** :— ನಾನೆ.

**ಆತ**:— ನೀನು ಓದಿಕೊಂಡು ಆದ ಮೇಲೆ, ನನ್ನ ಕಾಗದಗಳನ್ನು ನಿಮ್ಮ-ಮ್ಮನ ಕೈಲಿ ಕೊಡುತ್ತಿದ್ದ್ಯಾ ?

**ಆಕೆ**:— ಇಲ್ಲ.

**ಆತ**:— ನಿನ್ನ ಕಾಗದಗಳನ್ನು ಯಾಕೆ ಅಷ್ಟು ಪುಟ್ಟ ಪುಟ್ಟದಾಗಿ ಬರೆಯುತ್ತಿದ್ದಿ. ಅದರಲ್ಲಿ ಏನೂ ಇರುತ್ತಿರಲಿಲ್ಲ. ನನ್ನ ಕಾಗದಗಳು ನೋಡು, ಏನೇನು ಬರೆಯುತ್ತಿದ್ದೆ.

**ಆಕೆ**:— ನನಗೆ ಬರೊಲ್ಲ.

**ಆತ**:— ಇನ್ನು ಮೇಲೇನೂ ಕಾಗದ ಬರೆಯುವ ಅಗತ್ಯವಿಲ್ಲವಲ್ಲ ! ನಿನಗೆ ಏನು ಬೇಕಾದ್ರೂ ಬಾಯಿ ಬಿಟ್ಟೇ ಕೇಳಬೇಕು. ಅಂದಹಾಗೆ, ನಿನಗೆ ದುಡ್ಡು ಬೇಕಾದ್ರೆ, ಸೀರೆ, ಬಟ್ಟೆ, ಜಾಕಟ್ಟು, ಇವೆಲ್ಲಾ ಬೇಕಾದ್ರೆ ನನ್ನ ಕೇಳು, ತಿಳೀತೋ ? ನಾಚಿಕೆಪಟ್ಟುಕೊಳ್ಳಬೇಡ.

**ಆಕೆ**:— ಹೂಂ.

**ಆತ**:— ಈಗ ದುಡ್ಡೇನಾದ್ರೂ ಬೇಕೇನು?

**ಆಕೆ**:— ಬೇಡ.

**ಆತ**:— ಬೇಕಾದ್ರೆ ಕೇಳು ಕೊಡುತ್ತೇನೆ.

**ಆಕೆ**:— ಹೂಂ.

**ಆತ**:— (ಅವಳು ಕೇಳುತ್ತಾಳೋ ಇಲ್ಲವೋ ಎಂದು ಅನುಮಾನಿಸಿ) ಇಲ್ಲದ್ರೆ ಒಂದು ಉಪಾಯ ಹೇಳುತ್ತೇನೆ, ಕೇಳು. ನನ್ನ ದುಡ್ಡೆಲ್ಲಾ ಆ ಪೆಟ್ಟಿಗೆಯಲ್ಲಿಟ್ಟಿರುತ್ತೇನೆ. ನಿನ್ನ ಹತ್ತಿರವೂ ಒಂದು ಬೀಗದ ಕೈ ಕೊಟ್ಟಿರುತ್ತೇನೆ.

**ಆಕೆ**:— ಬೇಡ.

**ಆತ**:— ಏನು ಬೇಡ ?

**ಆಕೆ**:— ಬೀಗದ ಕೈ.

**ಆತ**:— ಹಾಗಾದ್ರೆ ದುಡ್ಡು ಬೇಕಾದ್ರೆ ನನ್ನ ಕೇಳುತ್ತೀಯಾ, ಸಂಕೋಚವಿಲ್ಲದೆ.

**ಆಕೆ**:— ಹೂಂ.

ಆತ :— ಮತ್ತೆ, ನಿನ್ನೆ ಮನಿಯಾರ್ಡರು ಯಾಕೆ ಬಂತು, ನಿಮ್ಮ ತಂದೆ ಯವರಿಂದ; ದುಡ್ಡು ಬೇಕು ಅಂತ ಬರೆದಿದ್ದಾ ?

ಆಕೆ :— ಇಲ್ಲ. ಕೊಡಬೇಕಾಗಿತ್ತು.

ಆತ :— ಅವರು ನಿನಗೆ ಕೊಡಬೇಕಾಗಿತ್ತೆ ? ನಿನ್ನ ಹತ್ತಿರ ಇಸಕೊಂಡಿದ್ದರೇ ಅವರು ?

ಆಕೆ :— ಹೂಂ.

ಆತ :— ಹಾಗಿದ್ರೆ ಸರಿ. ಆ ದುಡ್ಡು ಏನು ಮಾಡ್ತೀಯಾ ?

ಆಕೆ :— ಕೊಡಲಾ ?

ಆತ :— ಬೇಡ ಬೇಡ. ನಿನ್ನ ಹತ್ತಿರವೇ ಇಟ್ಟುಕೋ. ನಿನಗೆ ಬೇಕಾದ ಹಾಗೆ ಉಪಯೋಗಿಸಿಕೋ. ನಾನೇನೂ ತಿಳಿದುಕೊಳ್ಳುವುದಿಲ್ಲ. ಆದ್ರೆ ನಿಮ್ಮ ತಂದೆಯವರಿಂದ ನಿನ್ನ ಖರ್ಚಿಗೆ ಏನೂ ತರಿಸಿಕೊಳ್ಳಬೇಡ ಅಷ್ಟೆ. ಇದುವರೆವಿಗೂ ಅವರ ಮನೆಯಲ್ಲಿದ್ದಾಗ ಸರಿ ಹೋಗುತ್ತಿತ್ತು. ಇನ್ನು ಮೇಲೆ ಚೆನ್ನಾಗಿರುವದಿಲ್ಲ, ತಿಳಿತೇ.

ಆಕೆ :— ಹೂಂ.

ಆತ :— (ಬೇರೆ ಪ್ರಸ್ತಾಪವನ್ನೆತ್ತಿ) ಇವತ್ತು ಸಾಯಂಕಾಲ ಸಿನೀಮಾಕ್ಕೆ ಹೋಗೋಣವೆ, ನಾವಿಬ್ರೆ. ಬರುತ್ತೀಯಾ ?

ಆಕೆ :— (ಹೆದರಿ) ಅಯ್ಯೋ ಬೇಡ.

ಆತ :— ಅದ್ಯಾಕೆ. ನಾನೆಲ್ಲಾ ಅಮ್ಮನಿಗೆ ಹೇಳುತ್ತೇನೆ, ನಾವು ಸಿನೀಮಾಕ್ಕೆ ಹೋಗಿಬಿಟ್ಟು ಬರುತ್ತೇವೆ ಅಂತ. ಅವರೇನೂ ಬೇಡ ಅನ್ನುವುದಿಲ್ಲ.

ಆಕೆ :— ನಾವಿಬ್ರೇ !

ಆತ :— ಹೌದು, ನಾವಿಬ್ರೆ ಹೋದರೆ ಚೆನ್ನ.

ಆಕೆ :— ಬೇಡ.

ಆತ :— ಹಾಗಿದ್ರೆ ಸಂಜೆ ವಾಕಿಂಗ್ ಆದ್ರೂ ಹೋಗೋಣ. ನಿನ್ನ ಕೆಲಸ ಮುಗಿಸಿಕೊಂಡು ಬಿಡು, ಸಂಜೆ ಹೊತ್ತಿಗೆ.

ಆಕೆ :— ಎಲ್ರೂ ನೋಡುತ್ತಾರೆ.

ಆತ :— ಅಯ್ಯೋ, ಹುಚ್ಚಿ ! ಏನು, ಮುಖಕ್ಕೆ ಬುರಕಿ ಹಾಕಿಕೊಂಡು ಹೋಗೋಣ ಅಂತೀಯಾ. ನೋಡಿದರೇನಂತೆ. ವಾಕಿಂಗ್ ಹೋಗು-

ತ್ತಿದ್ದಾರೆ ಅಂದುಕೊಳ್ಳುತ್ತಾರೆ. ಅಷ್ಟೆ ತಾನೆ. ಏನು ತಪ್ಪು ಅದರಲ್ಲಿ? ಇವತ್ತು ಹೋಗೋಣ.

ಆಕೆ :— ಇವತ್ತು ಬೇಡ.

ಆತ :— (ಆಕೆಯ ಕೈಹಿಡಿದುಕೊಂಡು, ಆಕೆಯನ್ನು ಹತ್ತಿರಕ್ಕೆ ಎಳೆಯುತ್ತಾ) ನಿಂತೇ ಇದ್ದೀಯಲ್ಲ. ಕೂತುಕೋ. ಈ ಖುರ್ಚಿ ಕೈ ಮೇಲೆ ಕೂತುಕೋ.

ಆಕೆ :— ಹೋಗ್ಲ ?

ಆತ :— ಏಕೆ ?

ಆಕೆ :— ಹೊತ್ತಾಯ್ತು.

ಆತ :— ಅಯ್ಯೋ ರಾಮ. ಹೊತ್ತಾಯ್ತು ಅಂದ್ರೇನೆ. ಈ ಕೋಣೆ ಬೇರೊಬ್ಬರ ಮನೆ, ನಡುಮನೆ ನಿನ್ನ ಮನೆ ಅಂತ ತಿಳಿದುಕೊಂಡೆಯಾ 'ಹೋಗ್ತೀನಿ, ಹೊತ್ತಾಯ್ತು' ಅಂತ ಹೇಳುವುದಕ್ಕೆ. ಅಯ್ಯೋ ಹುಚ್ಚಿ.

ಆಕೆ :— ಎದ್ದಿದಾರೇನೋ.

ಆತ :— ಅಮ್ಮಾನೆ. ಎದ್ದಿದ್ದರೇನೀಗ? ದೇವರ ಮನೆಯಲ್ಲಿ ರಾಮಾಯಣ ಪಾರಾಯಣ ಮಾಡ್ತಾ ಕೂತಿರುತ್ತಾರೆ. ಅವರಿಗೇನೂ ಗೊತ್ತಿಲ್ಲಾ ಅಂತ ತಿಳಿದುಕೊಂಡಿದ್ದೀಯಾ, ನೀನು ಇಲ್ಲಿಗೆ ಬಂದಿರೋದು. ನೀನು ಈ ಕೋಣೆಗೆ ಬರುವುದು ಕಳ್ಳತನದಲ್ಲಲ್ಲ, ತಿಳೀತೇ. ಈಗ ಇನ್ನೂ ಒಂದು ಗಂಟೆ. ಮೂರು ಗಂಟೆತನಕ ಇಲ್ಲೇ ಇರು. ಆ ಮೇಲೆ ಕಾಫಿ ಮಾಡಲಿಕ್ಕೆ ಹೋಗು. ಅಲ್ಲೀವರೆಗೂ ಇನ್ನೇನೂ ಕೆಲಸವಿಲ್ಲ ತಾನೆ.

ಆಕೆ :— (ಇಲ್ಲವೆಂತ ತಲೆಯಾಡಿಸುವಳು)

ಆತ :— ಸರಿ ಮತ್ತೆ, ಹಾಗಾದ್ರೆ ಅಲ್ಲಿವರೆಗೂ ಇಲ್ಲೇ ಕೂತುಕೋ.

ಆಕೆ :— (ಬಾಗಿಲಿನ ಕಡೆಗೆ ತಿರುಗಿ, ಅರ್ಥಗರ್ಭಿತವಾಗಿ) ಬಾಗಿಲು

ಆತ :— ಮುಚ್ಚಿ ಚಿಲುಕ ಹಾಕಿದ್ದೀನಲ್ಲ. ಇನ್ನೇನು ಭಯ.

ಆಕೆ :— ಬೇಡ.

ಆತ :— ಬಾಗಿಲು ಮುಚ್ಚಿರುವುದು ಬೇಡವೆ.

ಆಕೆ :— ಊಹು.

ಆತ :— ಹಾಗಿದ್ದರೆ ಪೂರ್ತಿ ತೆರೆದು ಬಿಡಲಾ ?

ಆಕೆ :— (ನಗ್ತುತ್ತಾ) ಬೇಡ ಬೇಡ.

ಆತ :— ಸ್ವಲ್ಪ ಓರೆ ಮಾಡಲಾ.

ಆಕೆ :— ಹೂಂ.

ಆತ :— ಏನಿದು ಹುಚ್ಚು. ಅರ್ಥವೇ ಆಗುವುದಿಲ್ಲ. ಬಾಗಿಲು ಹಾಕಿರಲೂ ಬಾರದು. ತೆಗೆದಿರಲೂ ಬಾರದು. ಹೋಗ್ಲಿ ಬಿಡು, ನನಗೇಕೆ—ನೀನು ಹೇಳಿದಷ್ಟು ಕೇಳಿ ಬಿಡುತ್ತೇನೆ. (ಬಾಗಿಲ ಬಳಿ ಹೋಗಿ ಚಿಲಕವನ್ನು ತೆಗೆದು ಬಾಗಿಲನ್ನು ಸ್ವಲ್ಪ ಓರೆ ಮಾಡುವನು.)

ಆತ :— (ಪುನಃ ಖುರ್ಚಿಯ ಮೇಲೆ ಬಂದು ಕುಳಿತು,) ನೋಡು, ಒಂದು ಆಲೋಚನೆ ಬಂದಿದೆ ಮನಸ್ಸಿನಲ್ಲಿ. ಪ್ರತಿತಿಂಗಳು ನಿನಗೆ ಇಷ್ಟು ರೂಪಾಯಿ ಅಂತ ಕೊಟ್ಟು ಬಿಡುತ್ತೇನೆ, ಇನ್ನು ಮೇಲೆ, ಸಂಬಳ ಬಂದ ಕೂಡಲೆ ಮನೆ ಖರ್ಚನ್ನೆಲ್ಲಾ ನೀನೇ ನೋಡಿಕೊಂಡು ಬಿಡು. ನೀನೇ ಇನ್ನು ಮೇಲೆ ಮನೆ ಯಜಮಾನಿ.

ಆಕೆ :— (ಭಯದಿಂದ) ಬೇಡಿ, ಅಂದ್ರೆ.

ಆತ :— ಏನೂ ಹೆದರಿಕೊಳ್ಳಬೇಡ. ಏನು, ಎತ್ತ, ಹೇಗೆ ಖರ್ಚು ಮಾಡಿದೆ, ಅಂತ ನಾನು ನಿನ್ನ ಕೇಳುವದಿಲ್ಲ.

ಆಕೆ :— ನನಗೆ ಬೇಡಿ.

(ಅಷ್ಟು ಹೊತ್ತಿಗೆ ಹೊರಗಡೆ ಯಾರೋ 'ರಾಯರೇ' ಅಂತ ಕೂಗುವರು. ಆಕೆ ಕಳ್ಳತನ ಮಾಡಿದವರು ಸಿಕ್ಕಿಬಿದ್ದಂತೆ ಬೆಚ್ಚಿಬಿದ್ದು; ಆತನಿಂದ ಎರಡು ಹೆಜ್ಜೆ ದೂರಸರಿದು ನಿಲ್ಲುವಳು. ಕೂಗಿದವರು ಒಳಗೆ ನುಗ್ಗಿಬಂದು ನಮ್ಮ ಏಕಾಂತವನ್ನು ನೋಡಿ ಬಿಟ್ಟರೋ ಏನೋ ಎಂಬಂತೆ ವರಾಂಡದ ಕಡೆಯ ಕೋಣೆಯ ಬಾಗಿಲಿನ ಕಡೆ ನೋಡುವಳು)

ಆತ :— ರಾಜು ಇರಬೇಕು. ಮಧ್ಯಾನ್ಹ ಬರುತ್ತೇನೆ ಅಂತ ಹೇಳಿದ್ದನಂತೆ; ಬಂದನೋ, ಇವತ್ತು.

(ಹೊರಗಡೆಯಿಂದ ಇನ್ನೂ ಗಟ್ಟಿಯಾಗಿ "ರಾಯರೇ" ಅಂತ ಕೂಗು ಕೇಳಿ ಬರುತ್ತೆ)

ಆತ :— ಇಲ್ನೋಡು. ಹೊರಗೆ ಹೋಗಿ ನಾನು ಮನೆಯಲ್ಲಿಲ್ಲ ಅಂತ ಹೇಳು

ಆಕೆ :— ಊಹು. ನೀವೇ ಹೇಳಿ ಅಂದ್ರೆ.

ಆತ :— ಸರಿಹೋಯ್ತು. ಏನು ಬುದ್ಧಿ ನಿನ್ನದು. ನಾನು ಹೊರಗೆ ಹೋಗಿ ಅವನಿಗೆ ನಾನು ಮನೆಯಲ್ಲಿ ಇಲ್ಲ ಅಂತ ಹೇಳಲಾ!

(ಬಹಳ ಗಟ್ಟಿಯಾಗಿ "ಶಾಯರೀ" ಅಂತ ಕೂಗು ಕೇಳಿ ಬರುತ್ತೆ)

ಆತ :— ನಾನು ಹೋಗಿ ಅವನನ್ನು ಕಳುಹಿಸಿ ಬಿಟ್ಟು ಬರುತ್ತೇನೆ. ಅಲ್ಲಿಯ ವರೆಗೂ, ಇಲ್ಲೇ ಇರು,

ಆಕೆ :— ಹೂಂ.

ಆತ :— ನಾನು ಹೊರಗೆ ಹೋಗುತ್ತಲು ನೀನು ಒಳಗೆ ಓಡೀಯ, ಆಮೇಲೆ.

ಆಕೆ :— ಉಹು.

(ಆತ ವರಾಂಡ ಕಡೆಯ ಬಾಗಿಲನ್ನು ತೆಗೆದುಕೊಂಡು ಹೊರಗೆ ಹೋಗುವನು. ಆತ ಕಣ್ಮರೆಯಾದ ಕೂಡಲೆ ಆಕೆ ಕೋಣೆಯಿಂದ ಮನೆಯೊಳಕ್ಕೆ ಮಾಯವಾಗುವಳು)

## ದೃಶ್ಯ ೨

[ ನಾವು ಅವರ ಮನೆಗೆ ಕದ್ದು ಹೋಗಿ ಸುಮಾರು ಒಂದು ವರುಷದ ಮೇಲಾಗಿರಬಹುದು. ಕೋಣೆಯಲ್ಲಿರುವ ಕ್ಯಾಲೆಂಡರು ನಮಗೆ ಇದರ ಸೂಚನೆಕೊಡುತ್ತದೆ. ಅಕಸ್ಮಾತ್ ಪುನಃ ಅದೇ ಕೋಣೆಗೆ ಬಂದಿದ್ದೇವೆ. ಆದರೆ ಅವರು ನಮ್ಮನ್ನು ಗಮನಿಸಿಲ್ಲ. ನಾವು ಅವರನ್ನು ಸೂಕ್ಷ್ಮವಾಗಿ ನೋಡಿದ್ದೇವೆ. ಆತನಿಗೆ ಮುಖದಲ್ಲಿ ಮುಂಚೆ ಇದ್ದ ಉತ್ಸಾಹದ ಕುರುಹಿಲ್ಲ. ಆತನಿಗೆ ಈಗ ಹೆಂಡತಿಯೊಬ್ಬಳನ್ನು ಆಳಿದರೆ, ಪ್ರಪಂಚವನ್ನೇ ಆಳಿದ ಹಾಗೆ ಎನ್ನುವುದು ತಿಳಿದಂತಿದೆ. ಮುಖದಲ್ಲಿ ಮೊದಲಿನ ಕೆಚ್ಚೂ ಇಲ್ಲ. ಸಮಾನ ಬಲವುಳ್ಳ ಎದುರಾಳಿನ ಮೇಲೆ ಹೋರಾಟಕ್ಕೆ ನಿಲ್ಲುವ ಜಟ್ಟಿಯ ಮುಖದಲ್ಲಿನ ಅನುಮಾನಾದಿಗಳು ಮುಖದಲ್ಲಿ ಮೂಡಿವೆ. ಆತ ಮಂಚದ ಮೇಲೆ ಮಲಗಿಕೊಂಡು, ಗೋಡೆಕಡೆ ಮುಖ ಮಾಡಿ, ಏನೋ ಪುಸ್ತಕವನ್ನು ಓದುತ್ತಿದ್ದಾನೆ. ಆತನ ಬೆನ್ನಿನ ಕಡೆ ಕುರ್ಚಿಯ ಮೇಲೆ ಆಕೆ ಕುಳಿತುಕೊಂಡು ಕಸೂತಿ ಹಾಕುತ್ತಾ ಇದ್ದಾಳೆ. ಅವಳ ಕಣ್ಣುಗಳಲ್ಲಿ ಮೊದಲು ಮಿಂಚುತ್ತಿದ್ದ ಭಯಾದಿಗಳ ಸುಳಿವಿಲ್ಲ. ಮುಖದಲ್ಲಿ ಧೈರ್ಯವಿದೆ. ಇಲಿಗಾಗಿ ಹೊಂಚು ಹಾಕುತ್ತಿರುವ ಬೆಕ್ಕಿನ ಚತುರತೆ ಅವಳಲ್ಲಿ ಕಾಣುತ್ತಿದೆ. ನಿಧಾನವಾದರೂ, ಗೆಲುವಂತು ತನ್ನದೇ ಎಂಬ ಧೈರ್ಯ ಅವಳಿಗಿದೆ)

ಆಕೆ :— ( ಕಸೂತಿ ಹಾಕುತ್ತಾ, ತಲೆಯನ್ನು ಬಗ್ಗಿಸಿಕೊಂಡೇ ) ಅದೇನು ಪುಸ್ತಕವೋ ಹಾಳು ಪುಸ್ತಕ. ಗಂಡಸರಿಗೆ ಪುಸ್ತಕ ಇದ್ದುಬಿಟ್ಟರೆ ಸರಿ, ಮಾತೇ ನಿಂತು ಹೋಗುತ್ತೆ. ಅಷ್ಟೇ ಅಲ್ಲ, ಕಿವೀನೂ ಕಿವುಡಾಗುತ್ತೆ. ಅಷ್ಟು ಹೊತ್ತಿನಿಂದ ಮಾತನಾಡಿಸುತ್ತಿದ್ದೀನಿ; ಕೋಣೆಗೆ ಬಂದು ಅರ್ಧ ಗಂಟೆ ಆಯ್ತು. ಇತ್ತಲಾಗೆ ಮುಖ ಸಹ ಇಲ್ಲಾ.

ಆತ:— (ಆಕೆ ಕಡೆ ತಿರುಗದೆಯೇ) ಎರಡೆರಡು ಕೆಲಸ ಒಟ್ಟಿಗೆ ಮಾಡಲು ಹೇಗೆ ಆಗುತ್ತೆ. ಪುಸ್ತಕವೂ ಓದಬೇಕು, ಮಾತೂ ಆಡಬೇಕು ಅಂದ್ರೆ ಆಗುವುದೇ ಇಲ್ಲ.

ಆಕೆ :— ಓದೋದೇ ಬೇಡ; ಮಾತೇ ಆಡಿ. ನಾನು ಇಲ್ಲಿ ಇಲ್ಲದೇ ಇರುವಾಗ ಬೇಕಾದಷ್ಟು ಓದಿ. ಈ ಸಲ ನಾನು ತವರೂರಿಗೆ ಹೋಗಿದ್ದಾಗ ಓದಬೇಡಿ ಅಂದೆನೆ. ಈಗ ನಾನು ಮಾತಾಡಿದ್ರೆ ಬೇಜಾರು ನಿಮಗೆ.

ಆತ :— ಯಾರಂದ್ರೆ ಬೇಜಾರು ಅಂತ. ಅಥವಾ ಒಂದು ವೇಳೆ ಆಂದೆ ಅಂತ ಇಟ್ಟುಕೊ. ನೀನೇನಾದರೂ ಸುಮ್ಮನಾಗುತ್ತೀಯೋ ? ಸುಮ್ಮನೆ ಮನಸ್ಸಿನಲ್ಲಿ ಮುಂಡಿಗೆ ಮಾಡಿಕೊಳ್ಳುತ್ತೀಯಾ ?

ಆಕೆ :— ಮತ್ತೆ, ನಾನು ಊರಿಂದ ಬಂದು ನಾಲ್ಕು ದಿವಸ ಆಯ್ತು. ಎರಡು ತಿಂಗಳ ತನಕ ಹೊರಟು ಹೋಗಿದ್ದೆ. ಇಲ್ಲಿಗೆ ಬಂದ ಮೇಲೆ ಒಂದು ದಿನ ಆದ್ರೂ ನನ್ನ ಜತೆ ಸರಿಯಾಗಿ ಮಾತನಾಡಿದ್ದೀರಾ ? ಈಗ ಮೂರು ದಿವಸದಿಂದ ನೀವಾಯ್ತು ಆ ಹಾಳು ಪುಸ್ತಕ ಆಯ್ತು.

ಆತ :— ಅಲ್ಲೇ, ನೀನು ಬಂದು ಇಲ್ಲಿ ಕೂತು ಬಿಟ್ಟಿದ್ದೀಯಲ್ಲಾ. ಒಳಗೆ ಅಮ್ಮ ಏನು ಮಾಡುತ್ತಿದ್ದಾರೆ ? ಕೂಗಿಯಾರು.

ಆಕೆ :— ಆಗಲೆ ಗೊರಕೆ ಹಾಕುತ್ತಿದ್ದಾರೆ ಅವರು; ಇನ್ನು ಎರಡು ಗಂಟೆ ವರೆವಿಗೂ ಏಳೋದಿಲ್ಲ ಅವರು. ಒಂದು ವೇಳೆ ಎದ್ದರೆ, ಎದ್ದ ಕೂಡಲೆ ಓದಲಿಕ್ಕೆ ರಾಮಾಯಣ, ಕನ್ನಡಕ, ಎರಡೂ ಇಟ್ಟುಬಿಟ್ಟು ಬಂದಿದ್ದೇನೆ, ತಿಳಿದುಕೊಳ್ಳುತ್ತಾರೆ, ಅವರು ನಾನು ಇಲ್ಲಿದ್ದೀನಿ ಅಂತ. ಕೂಗೋದೆ ಇಲ್ಲ, ಪಾಪ.

ಆತ :— ಮೆತ್ತಗ ಮಾತಾಡ. ನಿನ್ನ ಗಲಾಟೆ ಕೇಳಿ ಎದ್ದಾರು. ಅಮ್ಮ ನಾದರೂ ಸುಖವಾಗಿ ನಿದ್ದೆ ಮಾಡಲಿ, ಅವಳ ನಿದ್ದೇನೂ ಏಕೆ ಕೆಡಬೇಕು.

ಆಕೆ :— (ಪ್ರತಿ ಸವಾಲು ಹಾಕುತ್ತಾ) ನನ್ನ ಗಂಟಲೇನು ದೊಡ್ಡದು ಅಲ್ಲ ಅಂದ್ರೆ. ನಿಮ್ಮ ಮಾತೇ ಕಾಳಿ ಬಾಯಿಗೆ ಮುತ್ತು ಕೊಟ್ಟ ಹಾಗೆ ಇರೋದು. ಪಕ್ಕದ ಮನೆಯವರು ಎಚ್ಚರಗೊಂಡಾರು.

ಆತ:— (ಪುಸ್ತಕವನ್ನು ಮುಚ್ಚಿ, ಆಕೆ ಕಡೆ ಹೊರಳಾಡುತ್ತಾ) ಅಲ್ಲೇ, ಇದೇನಿದು, ಕೋಣೇನೋ, ರೇಲ್ವೆ ಸ್ಟೇಷನ್ ಪ್ಲಾಟ್‌ಫಾರಮ್ಮೋ? ಇಷ್ಟೊಂದು ಸಾಮಾನುಗಳನ್ನು ತಂದು ಹಾಕಿದ್ದೀಯಲ್ಲಾ, ಟ್ರಂಕುಗಳು, ಮೂಟೆ, ಪೆಟ್ಟಿಗೆ. ಎಲ್ಲಾ ಇಲ್ಲೇ ತುರಕಬೇಕೆ! ಓಡಾಡೋಕೆ ಜಾಗವೇ ಇಲ್ಲ. ಅರ್ಧ ಸಾಮಾನಾದರೂ ನಡುಮನೆಯಲ್ಲಿಡಿಸು.

ಆಕೆ :— (ಕಸೂತಿ ಹಾಕುವದನ್ನು ಕೈ ಬಿಟ್ಟು) ಇಲ್ಲೇ ಇದ್ರೆ ಏನು ಆಗುತ್ತೊ, ನಿಮಗೆ. ಕಣ್ಣು ಕುಕ್ಕುತ್ತೆಯೇ? ನನಗೆ ಬಿಡುವಾಗಿದ್ದಾಗ, ನನ್ನ ಬಟ್ಟೇ ಬರೆ, ಸೀರೆ, ಎಲ್ಲಾ ನೋಡಿಕೊಳ್ಳುತ್ತಿರಬೇಕು. ಎಲ್ಲಾ ನಡುಮನೆಯಲ್ಲಿ ಹರಡಿಕೊಳ್ಳುವುದಕ್ಕಾಗುತ್ತೆಯೆ?

ಆತ :— ಮತ್ತೆ, ಇಲ್ಲಿ ಹರಡಿಕೊಳ್ಳಬೇಕು ಅಂತೀಯಾ. ಇಷ್ಟಕ್ಕೂ ಇದು ಯಾರ ಕೋಣೆ? ನೀನೇ ಹೇಳಿ ನಿನ್ನದೋ ನನ್ನದೋ? ನನ್ನ ಸಾಮಾನೆಲ್ಲ ಹಾಳಾಗುತ್ತೆ ಅಷ್ಟೆ.

ಆಕೆ:— ಅಲ್ಲಾಂದ್ರೆ ಬೆಳಗ್ಗಿಂದ ಒಂದು ಮಾತೂ ಇಲ್ಲ, ಹದಿನೈದು ಇಪ್ಪತ್ತು ಸಲ ಏನಾದರೊಂದು ನೆವ ಹಾಕಿಕೊಂಡು ಕೋಣೆಗೆ ಬಂದ ರೂನುವೆ. ಏನೋ, ಮಧ್ಯಾನ್ಹ, ನಿಮಗೂ ಇವತ್ತು ರಜಾ, ನಿಧಾನ ವಾಗಿ ಕುಳಿತುಕೊಂಡು ಮಾತನಾಡೋಣ ಅಂತ ಬಂದ್ರೆ, ಇದೇನಿದು ನಿಮ್ಮ ಒಣಾ ಟೀಕೆ? ಹೀಗೇನೆ ನೀವು ಮಾತಾಡೋದು.

ಆತ :— ಸರಿ ಕಣೆ, ನೀನು ಹೇಳೋ ವೇದಾಂತ. ಆದರೆ ನಾವು ಹುಡುಗರ ಹಾಗೆ ಚೊಲ್ಲು ಚೊಲ್ಲು ಮಾತಾಡುತ್ತಾ ಕೂತಿದ್ದರ್ರೆ ಅಮ್ಮ ಏನಂದು ಕೊಂಡಾಳು. ನೀನೇ ಹೇಳು.

ಆಕೆ :— ಅವರೇನು ತಿಳಿದುಕೊಳ್ಳುತ್ತಾರೆ ಪಾಪ. ಇಷ್ಟಕ್ಕೂ ಅವರಿಗೇನು ಗೊತ್ತಿಲ್ಲವೆ? ಈಗ ಅತ್ತಿಗೆ ಇದ್ದಾರಲ್ಲ; ಅವರನ್ನ ನೋಡಿ. ಅವರು, ಅವರ ಗಂಡ ಯಾವಾಗ್ಲೂ ಒಟ್ಟಿಗೆ ಎಷ್ಟು ಚೆನ್ನಾಗಿ ಮಾತಾಡ್ತಾ ಕೂತಿರುತ್ತಾರೆ. ಅವರ ಗಂಡ ನಿಮ್ಮ ಹಾಗೆ ಪುಸ್ತಕ ಹಿಡಿದು ಕೊಂಡು ಮೂಲೇಲಿ ಮುದುರಿಕೊಂಡು ಇರುವುದಿಲ್ಲ. ಅವರ ಹೆಂಡತೀನ ಕಂಡರೆ ಎಷ್ಟೋ ಆದರ ಅವರಿಗೆ. ಮದುವೆ ಆಗೋದೇಕೆ. ಮಾತಾಡೋದೆ ತಪ್ಪು ಆಗುವ ಹಾಗಿದ್ದ ತೆ.

ಆತ :— ನನಗೆಲ್ಲ ಗೊತ್ತು ಕಣೆ, ನೀನು ಹೇಳೋ ವಿಷಯ. ಅದ್ರೆ ಇಲ್ಲಿಗೆ ಬಂದವಳು ಸುಮ್ಮನೆ ಆದ್ರೂ ಕೂತಿರುತ್ತೀಯಾ? ಏನಾದ್ರೊಂದು ಜಗಳ ತೆಗೆಯುತ್ತೀಯಾ. ನನ್ನ ಕೇಳಿದ್ರೆ ಮಧ್ಯಾನ್ಹ ನೀನು ಕೋಣೆಗೆ ಬರುವುದೇ ಬೇಡ. ಎಂಜಲುಗೋನು ಆಗುವ ಹೊತ್ತಿಗೆ ಒಂದರ ಮೇಲಾಗಿರುತ್ತೆ. ಹಾಗೆ ಕಾಫೀನು ಮಾಡಿಬಿಟ್ಟು ಕಳುಹಿಸಬಾರದೇ?

ಆಕೆ :— ಕಳುಹಿಸುವುದೇಕೆ. ತಂದರೆ ಕೋಮಲಾ ತಂದುಕೊಡಬೇಕು. ಅವಳು ಅರ್ಧ ಕಾಫಿಯುಲ್ಲಾ ತುಳುಕಿಸಿಬಿಡುತ್ತಾಳೆ. ಅಲ್ಲಾ, ನಾನು ತಂದುಕೊಟ್ರೆ ಆಗದೇನೋ ನಿಮಗೆ.

ಆತ : — ನೋಡು. ಎಲ್ಲಿಂದೆಲ್ಲಿಗೋ ಹಾರುತ್ತಿ. ನಿನ್ನ ಸ್ವಭಾವವೇ ಹೀಗೆ. ನೀನು ಕಾಫಿ ತರಕೂಡದು ಅಂತ ನಾನು ಹೇಳಿದೆನೆ? ಈ ಸಣ್ಣ ಪುಟ್ಟ ವಿಷಯಗಳಲ್ಲೂ ನಿನಗೆ ಯಾಕೆ ತೊಂದರೆ ಅಂತ ಹಾಗೆ ಹೇಳಿದೆ ಅಷ್ಟೆ.

ಆಕೆ :— ಅಂದ ಹಾಗೆ ಇವತ್ತು ಎರಡು ಲೋಟಾ ಕಾಫಿ ಜಾಸ್ತಿ ಮಾಡಬೇಕು. ಪಂಕಜ ಬರುತ್ತಾಳೆ. ಪಂಕಜ ಯಾರು ಗೊತ್ತೆ? ಇಲ್ಲಿ ಹೊಸದಾಗಿ ಹೆಡ್ ಗುಮಾಸ್ತಿ ಆಗಿ ಬಂದಿದ್ದಾರಲ್ಲ ಅವರ ಹೆಂಡತಿ. ಇವತ್ತು ಅವರು ಗಂಡ ಹೆಂಡತಿ ಇಬ್ಬರೂ ಬರುತ್ತಾರಂತೆ ಸಂಜೆ, ಪಂಕಜ ಹೇಳಿ ಕಳುಹಿಸಿದ್ದಾಳೆ. ನೀವು ಮನೇಲಿ ಇರಿ.

ಆತ :— ನಾನು ಸಂಜೆ ಮನೇಲಿ ಇರೋಕೆ ಆಗೋದೆ ಇಲ್ಲ. ಅವಸರದ ಕೆಲಸ ಇದೆ; ರಾಜು ಬರುತ್ತಾನೆ, ಸ್ವಲ್ಪ ಹೊತ್ತಿಗೆ. ಹೋಗಬೇಕು. ಕಾಫಿಗೆ ಇಡು.

ಆಕೆ :— (ಆತನ ಮಾತುಗಳಿಗೆ ನಿಗಾ ಕೊಡದೆ) ಪಂಕಜ ಯಾರು ಗೊತ್ತಿಲ್ಲವೆ? ನಮಗೆ ಸಂಬಂಧ ಅವರು. ನಮ್ಮ ತಾಯಿ ದೊಡ್ಡಪ್ಪನ ಚಿಕ್ಕತ್ತೆ ಮೊಮ್ಮಗಳು ಅನಸೂಯ ಇಲ್ಲವೆ, ಆಕೆ ಗಂಡನ ಸೋದರ ಸೊಸೆ, ಆಕೆ.

ಆತ :— ಆಕೆ ನಿನಗೆ ಸಂಬಂಧದವಳಾಗಿದ್ದರೇನೂ, ಬಿಟ್ಟಿದ್ದರೇನೂ, ನನಗ್ಯಾಕೆ. ಅವರುಗಳ ಸಮಾಚಾರವೇ ಬೇಕಿಲ್ಲ ನನಗೆ. ಆಕೆ ಸತ್ತರೆ ನಾನೇನು ತಿಥಿ ಮಾಡುವ ಹಾಗಿಲ್ಲ ಒಂದೂ ಇಲ್ಲ.

ಆಕೆ :— ಏನೋ ನಮ್ಮ ಜನ ಅಂತ ಹೇಳಿದೆ. ಬಿಡಿ. ಆದ್ರೆ ಆಕೆ ಯಾಕೆ ಸಾಯಬೇಕು, ಪಾಪ. ಅಯ್ಯೋ ಅಂದ ಹಾಗೆ, ಆಕೆ ಸತ್ತೇ ಹೋಗಿದ್ದಳು ಅಂದ್ರೆ. ನಾವೆಲ್ಲಾ ಒಟ್ಟಿಗೆ ಓದುತ್ತಿದ್ದೆವು ಆಗ. ನನ್ನ ಪ್ರಸ್ತಕ್ಕೊ ಮುಂಚೆ ಸ್ಕೂಲಿಗೆ ಹೋಗುತ್ತಿರುವಾಗ ಒಂದು ದಿನ ಟಾಂಗ ಉರುಳಿಕೊಂಡು ಬಿಟ್ಟು, ಆಕೆ ಸತ್ತೇ ಹೋಗಿ ಬಿಟ್ಟಿದ್ದಳು. ನಾನು ಆ ದಿವಸ ಹೋಗಿರಲಿಲ್ಲ.

ಆತ :— ನೀನ್ಯಾಕೆ ಹೋಗಿರಲಿಲ್ಲ ಆ ದಿವಸ? ಹೋಗ್ಲಿ ಬಿಡು. ನನಗೆ ಆ ಕಥೆಯೇ ಬೇಕಿಲ್ಲ. ಬೇಕಾದ್ರೆ ಬರೆದು ಕಳುಹಿಸು, ಎಲ್ಲಿಗಾದ್ರೂ. ಈಗೇನು ಹೆಂಗಸರು ಬರೆದಿದ್ದು ಅಂದರೆ ಏನು ಬೇಕಾದ್ರೂ ಪ್ರಕಟಿಸುತ್ತಾರೆ.

ಆಕೆ :— ಸರಿ ಬಿಡಿ ಅಂದ್ರೆ. ಬರೆಯೋದು ಒಂದು ದಂಡ ಗಂಡಸರಿಗೆ. ಅಲ್ಲ, ಈ ಸಲ ನಾನು ಊರಿಗೆ ಹೋಗಿದ್ದಾಗ ನಿಮಗೆ ಎಂಟೆಂಟು ಪೇಜ ಕಾಗದ ಬರೆಯುತ್ತಿದ್ದೆನಲ್ಲಾ, ನಿಮ್ಮಿಂದ ಒಂದು ಕಾಗದಕ್ಕಾದರೂ ಸರಿಯಾಗಿ ಉತ್ತರ ಬಂದಿದೆಯೇ? ಬರೆದರೂ ಅದೇನು ಬರೆಯೋಣಿಕೆ, ಚೋಟುದ್ದ ಕಾಗದದಲ್ಲಿ, ಸಾಕು ಬಿಡಿ ಅಂದ್ರೆ, ದೊಡ್ಡದಾಗಿ ಕಾಗದ ಬರೆದಿದ್ದರೆ ದುಡ್ಡು ಖರ್ಚಾಗುತ್ತಿತ್ತೆ, ಕೈ ಸವೆಯುತ್ತಿತ್ತೇ?

ಆತ :— ನಿನಗೇನು ಗೊತ್ತು; ನಿನ್ನ ಕಾಗದಗಳಿಗೆ ಮೇಲೆ ಹಚ್ಚಿದ್ದ ಸ್ಟಾಂಪುಗಳು ಸಾಲದು ಅಂತ, ನಾನು ಪ್ರತಿ ಸಲ ಎರಡೆರಡಾಣೆ ಕೊಟ್ಟು ತಗೋತಿದ್ದದ್ದು. ಅಂದಹಾಗೆ ದುಡ್ಡು ಅನ್ನುತ್ತಲು ನೆನಪಿಗೆ ಬಂತು ನೋಡು. ನಿನ್ನೆ ರಾತ್ರಿ ಆ ಕೋಟಿನ ಜೇಬಿನಲ್ಲಿ ಐವತ್ತು ರೂಪಾಯಿ

ಹಾಕಿದ್ದೆ, ಅಲ್ಲಿಲ್ಲೇ ಇಲ್ಲ; ಈಗ ಒಂದು ಗಂಟೆಯಿಂದ ಹುಡುಕಿ ಸಾಕಾಯ್ತು. ನೀನು ತೆಗೆದಾ?

ಆಕೆ :— ಮುಂಚೇನೆ ಯಾಕೆ ಕೇಳಬಾರದಾಗಿತ್ತು, ಒಂದು ಗಂಟೆ ಹುಡುಕುವುದರ ಬದಲು. ಇವತ್ತು ಬೆಳಿಗ್ಗೆ ಯಾತಕ್ಕೊ ಆ ಜೇಬಿನಲ್ಲಿ ಕೈ ಹಾಕಿದೆ. ರೂಪಾಯಿ ಸಿಕ್ಕಿತು. ನೀವಂತು ಕೈ ಎತ್ತಿ ಕೊಡೋದಿಲ್ಲ, ನಾನಾದರೂ ತೆಗೆದುಕೊಳ್ಳೋಣ ಅಂತ, ತೆಗೆದುಕೊಂಡೆ.

ಆತ :— ಸದ್ಯ; ರೂಪಾಯಿ ಕೊಡು. ನನಗೆ ಬೇಕು.

ಆಕೆ :— ನನ್ನ ಹತ್ತಿರ ಎಲ್ಲಿವೆ ಈಗ?

ಆತ :— ಏನಾಯ್ತು ?

ಆಕೆ :— ಹತ್ತು ಗಂಟೆ ಹೊತ್ತಿನಲ್ಲಿ ಮನೆ ಮೇಲೆ ಸೀರೆ ಬಂದಿತ್ತು. ರೇಷ್ಮೆ ಸೀರೆಗಳು. ಹೋದ್ರೆ ಬಂದ್ರೆ ಉಟ್ಕೊಳ್ಳಲಿಕ್ಕೆ ಒಂದು ಸೀರೆ ಇರಲಿಲ್ಲ ಆದ್ದರಿಂದ ಒಂದು ರೇಷ್ಮೆ ಸೀರೆ ತೆಗೆದುಕೊಂಡೆ, ಐವತ್ತು ಮೂರು ರೂಪಾಯಿಗಳಿಗೆ. ಮೂರು ನನ್ನ ಹತ್ತಿರ ಇರೋದು ಹಾಕಿದ್ದೇನೆ. ನೀವು ಆ ಮೂರು ರೂಪಾಯಿ ಕೊಡಬೇಕು ಇನ್ನು.

ಆತ :— ಏನಿದು, ಅನಿಷ್ಟ. ಹೇಳದೆ ಕೇಳದೆ ಜೇಬಿನಲ್ಲಿರುವ ದುಡ್ಡು ತೆಗೆದು ಬಿಟ್ಟು ಹೀಗೆ ಸಿಕ್ಕಾಪಟ್ಟೆ ಖರ್ಚು ಮಾಡಿ ಬಿಡುವುದೆ? ಇನ್ನು ಮೇಲೆ ಒಂದು ಕಬ್ಬಿಣದ ಪೆಟ್ಟಿಗೆ ತಂದು ಬೀಗ ಹಾಕಿ ಬೀಗದ ಕೈ ನನ್ನ ಹತ್ತಿರ ಭದ್ರವಾಗಿಟ್ಟುಕೊಂಡಿರಬೇಕು ಅಷ್ಟೆ.

ಆಕೆ :— ಹೌದು ಹೌದು. ಹಾಗೇ ಮಾಡಿ. ಜೇಬಿನಲ್ಲಿ ದುಡ್ಡು ಇಡಬೇಡಿ. ಆಳುಪಾಳು ಓಡಾಡುತ್ತಾ ಇರುತ್ತಾರೆ. ಕಬ್ಬಿಣದ ಪೆಟ್ಟಿಗೆಗೆ ಎರಡು ಬೀಗದ ಕೈ ಮಾಡಿಸಿ ಒಂದು ನನಗೆ ಕೊಡಿ.

ಆತ :— ನಿನಗೆ ಬೀಗದ ಕೈ ಕೊಡುವ ಹಾಗಿದ್ದರೆ, ಕಬ್ಬಿಣದ ಪೆಟ್ಟಿಗೆ ಯಾಕೆ ತರಬೇಕು. ಆ ದುಡ್ಡಾದರೂ ಉಳಿಸಿಕೊಳ್ಳಬಹುದು. ಇಲ್ಲಿ ಕೇಳು. ಇನ್ನು ಮೇಲೆ ನಿನ್ನ ಸೀರೆ, ಬಟ್ಟೆ, ಜಾಕೆಟ್ಟು ಇವಕ್ಕೆಲ್ಲಾ ನಿಮ್ಮಪ್ಪನಿಗೆ ಬರೆದು ದುಡ್ಡು ತರಿಸಿಕೊ.

ಆಕೆ :— ಬಲು ಚೆನ್ನಾಗಿರುತ್ತೆ ಅಂದ್ರೆ, ಅವರಿಗೆ ದುಡ್ಡು ಕಳುಹಿಸು ಅಂತ ಬರೆದರೆ. ಅವರ ಮನೆಯಲ್ಲಿರುವವರೆವಿಗೂ ಸರಿ. ಆದ್ರೆ ಇಲ್ಲಿಗೆ ಬಂದ ಮೇಲೂ ಅವರಿಗೆ ಬರೆದರೆ ಏನು ಚೆನ್ನ ಹೇಳಿ.

ಆತ :— ಚೆಂದವೋ, ಅಂದವೋ. ಬರೆದರೇನೀಗ ತಪ್ಪು. ಮಗಳು ಅಂತ ಕಳುಹಿಸುತ್ತಾರೆ. ಬೇಕಾದ್ರೆ ನನಗೂ ಕೊಡು. ಸಿನಿಮಾ ಖರ್ಚಿಗಾದರೂ ಆಗತ್ತೆ.

ಆಕೆ :— ಅಂದ ಹಾಗೆ, ಇವತ್ತು ಪಂಕಜಮ್ಮ ಅವರ ಗಂಡ ಇಬ್ಬರೂ ಬರುತ್ತಾರಲ್ಲ, ಇಲ್ಲಿಂದ ಹಾಗೆ ಅವರು ಸಿನಿಮಾಕ್ಕೆ ಹೋಗುತ್ತಾರೆ. ಸಿನಿಮಾಕ್ಕೆ ಹೋಗ್ತಾ ದಾರಿಯಲ್ಲೇ ಅವರು ಇಲ್ಲಿಗೆ ಬರೋದು. ನಾವಿಬ್ಬರೂ ಹೋಗೋಣವೆ, ಸಿನಿಮಾಕ್ಕೆ, ಇವತ್ತು.

ಆತ :— ಥೂ, ಇವತ್ತು ಒಳ್ಳೇ ಚಿತ್ರ ಇಲ್ಲ.

ಆಕೆ :— ಸರಿ. ನೀವಂತೂ ಹೋಗ್ತಾನೇ ಇರ್‍ತೀರಿ. ನಾವೂ ಹೋಗೋಣ ಅಂದಾಗಲೆಲ್ಲಾ, ಸಿನಿಮಾ ಚೆನ್ನಾಗಿಲ್ಲ ಅಂದು ಬಿಡೋದು ಬುದ್ಧಿವಂತಿಕೆ. ನಾವಿಬ್ರು ಯಾವಾಗ ಹೋಗೋದು ಸಿನಿಮಾಕ್ಕೆ.

ಆತ :— ಹೋಗಿರಲಿಲ್ಲೆ " ಗೃಹಲಕ್ಷ್ಮಿ "ಗೆ.

ಆಕೆ :— ಒಂದು ವರ್ಷಕ್ಕೆ ಬಂತು, ಹೋಗಿ. ಅದೂ ಈ ಕೇರಿಯುವರೆಲ್ಲ ಹೋಗಿದ್ದರಿಂದ. ನಾವಿಬ್ರೆ ಒಂದು ಸಿನಿಮಾಕ್ಕಾದರೂ ಹೋಗಿದ್ದೇವೆಯೆ?

ಆತ :— ನಾವಿಬ್ರೆ ಎಂದ್ರೇನೆ. ನಮ್ಮಿಬ್ಬರಿಗೇ ಸಿನಿಮಾ ತೋರಿಸುತ್ತಾರೆಯೆ? ಇಲ್ಲಿಂದ ನಾವಿಬ್ರೆ ಹೋಗಿ ಅಲ್ಲಿ ಎಲ್ಲರ ಮಧ್ಯೆ ಕೂತರೇನು, ಎಲ್ಲರ ಜತೇಲೂ ಇಲ್ಲಿಂದಲೆ ಹೋದರೇನು.

ಆಕೆ :— ಸಿನಿಮಾ ಅಂತೂ ಇಲ್ಲ. ಇವತ್ತು ಸಂಜೆ ವಾಕಿಂಗ್ ಆದರೂ ಹೋಗೋಣವೆ, ಪಾರ್ಕಿಗೆ.

ಆತ :— ವಾಕಿಂಗು! ನಿನಗೆಲ್ಲೋ ಹುಚ್ಚು. ಸಂಜೆ ಜರೂರು ಕೆಲಸ ಇದೆ ಅಂತ ಹೇಳಲಿಲ್ಲೆ. ಅಲ್ಲ ಇಷ್ಟಕ್ಕೂ ಸಂಜೆ ಮನೆ ಕೆಲಸಗಳನ್ನು ಬಿಟ್ಟು ನನ್ನ ಜತೆ ವಾಕಿಂಗು ಬರುವುದಕ್ಕಾಗುತ್ತೆಯ್ಯ, ನಿನಗೆ.

ಆಕೆ :— ಸರಿ ಬಿಡಿ. ಬೆಳಗ್ಗೆಯಿಂದ ಸಂಜೆಯುವರೆವಿಗೂ ನಿಮಗೆ ಕಛೇರಿ. ಸಂಜೆಯಿಂದ ರಾತ್ರಿ ಹತ್ತು ಗಂಟೆ ತನಕ ಕ್ಲಬ್ಬು. ಆ ಮೇಲೆ ಮನೇಗೆ ಬಂದು ಮುಸುಕು ಹಾಕೋದೇ ತಡ, ಗೊರಕೆ. ಇನ್ನು ನನ್ನ ಜತೆ ಮಾತನಾಡೋಕೆ ನಿಮಗೆ ಪುರಸೊತ್ತು ಎಲ್ಲಿ?

ಆತ: — ಬಾಗಿಲು ತೆಗೆಯೆ, ಎಷ್ಟು ಶೆಖೆ. ಅದೇನು ಮಧ್ಯಾನ್ಹದ ಹೊತ್ತೂ ಬಾಗಿಲು ಚಿಲಕ ಹಾಕಲೇ ಬೇಕೆ?

ಆಕೆ:— ಬಾಗಿಲು ತೆಗೆದುಕೊಂಡು ನಾವು ಇಲ್ಲಿ ಮಾತಾಡುತ್ತಾ ಕೂತಿರುವುದಕ್ಕಾಗುತ್ತೆಯೆ ?

ಆತ:— ಅರ್ಧಬಾಗಿಲು ಆದರೂ ತೆಗೆ, ಹೋಗಲಿ. ಒಂದಿಷ್ಟು ಗಾಳಿ ಆದರೂ ಆಡಲಿ.

(ಆಕೆ ಎದ್ದುಹೋಗಿ ನಡುಮನೆ ಕಡೆಯ ಬಾಗಿಲ ಚಿಲುಕವನ್ನು ತೆಗೆದು ಬಾಗಿಲನ್ನು ಅರ್ಧ ತೆಗೆದು ಬಂದು ಅವನ ಬಳಿ ಮಂಚದ ಮೇಲೆ ಕುಳಿತುಕೊಳ್ಳುವಳು.)

ಆತ:— ಇದೇನೆ. ಬಾಗಿಲು ತೆಗೆದು ಇಲ್ಲಿ ಬಂದು ಕುಳಿತುಕೊಂಡಿ. ಹೊತ್ತಾಯ್ತು ಹೋಗೇ. ಕಾಫಿ ಆದ್ರೂ ಮಾಡು, ಒಳಗೆ ಹೋಗಿ.

(ಅಷ್ಟು ಹೊತ್ತಿಗೆ ಹೊರಗಡೆ ಯಾರೋ "ರಾಯರೇ" ಅಂತ ಕೂಗುವರು. ಆಕೆ ಕೇಳಿಸಿಯೂ ಕೇಳಿಸದ ಹಾಗೆ ಇರುವಳು.)

ಆತ:— ಯಾರೋ ಕೂಗಿದರು ಅಲ್ವೆ ?

ಆಕೆ:— ನಿಮಗೇಲ್ಲೋ ಕನಸು. ಯಾರೂ ಕೂಗಲಿಲ್ಲ.

(ಹೊರಗಡೆಯಿಂದ ಇನ್ನೂ ಗಟ್ಟಿಯಾಗಿ "ರಾಯರೇ" ಅಂತ ಕೂಗು ಕೇಳಿಬರುತ್ತದೆ.)

ಆತ:— ಕೇಳಿದಾ. ರಾಜು ಅಂತ ಕಾಣುತ್ತೆ, ಕೂಗುತ್ತಿರೋದು. ಹೋಗು. ಅವನಿಗೂ ಒಂದು ಲೋಟ ಕಾಫಿ ಮಾಡು.

ಆಕೆ:— (ಅವನ ಮೈಮೇಲೆ ಒರಗಿ ಕೊಳ್ಳುತ್ತಾ) ಅಯ್ಯೊ, ರಜಾ ಇದೆ ಅಂದ್ರೆ ಇವತ್ತು ಹ್ಯಾಗಿದ್ರೂ. ಮನೆಯಲ್ಲೇ ಇರಿ. ಕೆಲಸ ಏನು ಇದ್ದೇ ಇರುತ್ತೆ. ನಾನು ಹೊರಗೆ ಹೋಗಿ ಅವರಿಗೆ ನೀವು ಮನೇಲಿಲ್ಲ ಅಂತ ಹೇಳಿಬಿಟ್ಟು ಬರ್ತೇನೆ.

(ಬಹಳ ಗಟ್ಟಿಯಾಗಿ "ರಾಯರೇ" ಅಂತ ಕೂಗು ಕೇಳಿಬರುತ್ತದೆ.)

ಆತ:— (ಎದ್ದು) ಸರಿ ಸರಿ. ನಿನ್ನ ಮಾತಂತೂ. ಒಳಗೆ ಹೋಗು. ರಾಜೂನ ಇಲ್ಲಿಗೆ ಕರಕೊಂಡು ಬರುತ್ತೇನೆ. ಜಾಗ್ರತೆ ಕಾಫಿ ಮಾಡಿ ಎರಡು ಲೋಟಾ ಕಾಫಿ ಕೋಮಲಾನ ಕೈಲಿ ಕಳುಹಿಸು. (ಎಂದು ಹೇಳಿ ವರಾಂಡದ ಕಡೆ ಬಾಗಿಲನ್ನು ತೆಗೆದುಕೊಂಡು ಹೊರಗೆ ಹೋಗುವನು. ಆಕೆ ಒಂದು ಕ್ಷಣ ಹಾಸಿಗೆ ದಿಂಬನ್ನು ಸವರುತ್ತಾ ಕುಳಿತಿದ್ದು ನಂತರ ನಿಟ್ಟುಸಿರು ಬಿಟ್ಟು ಒಳಗೆ ನಿಧಾನವಾಗಿ ಹೋಗುವಳು)

## ದೃಶ್ಯ ೧

(ನಾವು ಕಡೆಯ ಸಾರಿ ಆಕೆಯನ್ನು-ಆತನನ್ನು ನೋಡಿ ಹತ್ತು ಹದಿನೈದು ವರ್ಷಗಳಂತೂ ಆಗಿರಬೇಕು. ಆತ ನಮಗೆ ದಾರಿಯಲ್ಲಿ ಅಕಸ್ಮಾತ್ ಸಿಗದಿದ್ದರೆ ನಾವು ಆತನನ್ನು ನೋಡುತ್ತಲೇ ಇರಲಿಲ್ಲ. ಕಛೇರಿಯಿಂದ ಮನೆಗೆ ಹಿಂದಿರುಗುತ್ತಿದ್ದಾನೆ. ಮಧ್ಯಾಹ್ನವೇ ಮನೆಗೆ ಬರುತ್ತಿದ್ದಾನೆ. ತಲೆ ಮೇಲೆ ಹಳೇ ಹ್ಯಾಟಿದೆ. ಹ್ಯಾಟಿನ ಒಳಗೆ ಕಾಣುವ ತಲೆಕೂದಲು ಅರ್ಧಕ್ಕರ್ಧ ನೆರೆತಿದೆ. ಕುತ್ತಿಗೆಗೆ ಹರಕು ಟೈ. ಷರಟಿನ ಕಾಲರು ನಾಯಿ ಬಾಲದಂತೆ ಸುತ್ತಿಕೊಂಡಿದೆ. ಕೈಲಿ ಕೋಲನ್ನು ಹಿಡಿದುಕೊಂಡು ಊರಿಕೊಂಡು ಬರುತ್ತಿದ್ದಾನೆ. ವಯಸ್ಸು ನಲವತ್ತರ ಒಳಗಿದ್ದರೂ ಅರವತ್ತು ದಾಟಿದವನಂತೆ ಕಾಣುತ್ತಾನೆ. ಆತನ ಮುಖದಲ್ಲಿ ಗೆಲುವೆಂಬುದೇ ಇಲ್ಲ. ಬಾಳಿನಲ್ಲಿ ಸಂಪೂರ್ಣವಾಗಿ ಉತ್ಸಾಹರಹಿತನಾಗಿರುವಂತೆ ತೋರಿ ಬರುತ್ತೆ. ಮೆಲ್ಲಗೆ ತನ್ನ ಮನೆಯಲ್ಲಿ ಬಂದು, ನಡುಮನೆ ಕಡೆ ಬಾಗಿಲಿನಿಂದ ನಮಗೆ ಪರಿಚಿತವಾಗಿರುವ ಕೋಣೆಗೆ ಬರಲು, ಮೆಲ್ಲನೆ ಕೋಣೆ ಬಾಗಿಲನ್ನು ತೆರೆದು, ಇಣಿಕಿ ನೋಡಿ, ಬಹಳ ಹೊತ್ತು ಮೀರಿ ಮನೆಗೆ ಬಂದಿರುವ ಹುಡುಗನಂತೆ ಕೋಣೆ ಒಳಗೆ ಬರುವಾಗಲೇ ಆ ಪರದೆ ಏಳುವುದು. ಆಕೆ ಬೀಸಣಿಕೆ ಹಾಕಿಕೊಳ್ಳುತ್ತಾ ಮಂಚದ ಮೇಲೆ ಮಲಗಿದ್ದಾಳೆ. ಮೊದಲು ನೋಡಿದಾಗಿನಕಿಂತ ಬಹಳ ದಪ್ಪವಾಗಿದ್ದಾಳೆ. ಆಳವಾಗಿ ಹೊಕ್ಕಿರುವ ಬಲಿತ ಬೇರಿನಂತಿದ್ದಾಳೆ. ತಾನೇ ಸರ್ವಾಧಿಕಾರಿಣಿ ಎಂಬುದು ಅವಳ ಠೀವಿಯಲ್ಲೇ ಎದ್ದು ನಿಂತಿದೆ. ಬಾಗಿಲು ತೆಗೆದುಕೊಂಡು ಬಂದ ಆತನನ್ನು ಅವಳು, ಅವನು ಏನಾದರೂ ತಪ್ಪು ಮಾಡಿಯಾನೇ, ದಂಡಿಸಿಯೇನೇ, ಎಂದು ಗಮನಿಸುತ್ತಿದ್ದಾಳೆ. ಆತ ಒಳಗೆ ಬಂದವನು ಹ್ಯಾಟನ್ನು ತೆಗೆದು ಬಾಗಿಲ ಹಿಂದಿನ ಗೂಟದ ಮೇಲಿದ್ದ ಸೀರೆಯ ಮೇಲಿಟ್ಟು, ಕೋಲನ್ನು ಅದೇ ಮೂಲೆಯಲ್ಲಿ ನಿಲ್ಲಿಸಿ, ಕುರ್ಚಿಯ ಅಂಚಿನ ಮೇಲೆ ಕುಳಿತು, ಕಾಲುಗಳಲ್ಲಿದ್ದ ಬೂಡ್ಸುಗಳನ್ನು ಬಿಚ್ಚಿ, ಅವುಗಳನ್ನು ಕೈಯಿಂದ ಮಂಚದ ಕೆಳಗೆ ದಬ್ಬುತ್ತಾನೆ.)

**ಆಕೆ:**— ಎಷ್ಟು ಸಲ ಹೇಳಬೇಕ್ರಿ ನಿಮಗೆ. ನಿಮ್ಮ ಹ್ಯಾಟೊ ಬೂಟೊ ಕೋಲೂ ಪಡಸಾಲೆಯಲ್ಲೋ, ನಡುಮನೆಯಲ್ಲೋ ಇಟ್ಟು ಬನ್ನಿ ಅಂತ. ತಿಳಿಯುತ್ತೋ ಇಲ್ಲವೋ ನಾನು ಹೇಳೋದು. ಮೊದಲೆ ಜಾಗ ಇಲ್ಲ, ಅದನ್ನೂ ತುರುಕ್ರಿ ಸರಿ ಹೋಗುತ್ತೆ. ಇದೇನು ಉಗ್ರಾಣ ಅಂತ ತಿಳಿದುಕೊಂಡಿರಾ. ಇನ್ನೊಂದು ಸಲ ನೀವು ಅವುಗಳನ್ನು ಇಲ್ಲಿ ತಂದಿಟ್ಟರೆ, ಕಿಟಕಿ ತೆಗೆದು ಬಿಸಾಕುತ್ತೇನೆ, ಹೊರಗೆ. ಪುನಃ ಕೊಂಡು ಕೊಡುವುದೂ ಇಲ್ಲ.

**ಆತ** :— ಮರೆತೆ.

**ಆಕೆ** :— ಏನು ಮರುವ್ರೋ. ಹುಡುಗಾಟ ಆಯ್ತು ಅಷ್ಟೆ ನಿಮಗೆ. ನಾನೊ-ಬ್ಬಳು ಬಡಕೊಳ್ಳಬೇಕು, ಎಲ್ಲಾ ದಕ್ಕೂ-ನಾನು ಅಂತಾನೆ ಇರೋದು, ನೀವು ಮಾತ್ರಾ ನೇ ಇರೋದು. ತುಟಿ ಪಿಟಕ್ಕಂತ ಸಹ ಅನ್ನೋದಿ-ಲ್ಲಲ್ಲ, ಅದು ನಿಮ್ಮ ಜಾಣತನ. ನಾನು ಎಷ್ಟು ಒರಲಿಕೊಂಡರೆ ತಾನೆ ಏನು.

**ಆತ** :— ಮಾತ್ಯಾಕೆ, ಅಂತ.

**ಆಕೆ** :— ಮಾತಾಡದೆ ಇರೋದಕ್ಕೆ ಹ್ಯಾಗಾಗುತ್ತೆ ಅಂತ ನಾನು ಕೇಳು ವುದು. ಮೂಕರಾದರೆ ಸರಿ. ಮೂಕರಂತೆ ಇರೋದು ಹ್ಯಾಗೆ ಆಗುತ್ತೆ ನಿಮಗೆ ಅಂತೀನಿ. ಈಗ ಮೂರು ದಿವಸದಿಂದ ನೋಡುತ್ತಿದ್ದೀನಿ, ನೀವಾಗೆ ಮಾತಾಡಿಸುತ್ತೀರೇನೋ ಅಂತ ಉಹು. ಏಕೆ ಅಂತ ನಾನು ಕೇಳೋದು.

**ಆತ** :— ಮಾತಾಡ್ದೆ ಏನು.

**ಆಕೆ** :— ಯಾರು ಬಾಗಿಲು ತೆಗೆದಿದ್ದು ನಿಮಗೆ? ಸೀನೂನೋ? ಯಾಕೆ ತೆಗೆದನೋ- ನಿಮ್ಮಮ್ಮ ಏನು ಮಾಡುತ್ತಿದ್ದರು ನೋಡಿದ್ರಾ.

**ಆತ** :— ನಿದ್ದೆ.

**ಆಕೆ** :— ಅಲ್ಲ, ಇದೇನಿದು. ಎಂದೂ ಇಲ್ದೆ ಇವತ್ತು ಮಧ್ಯಾನ್ಹ ಮನೆಗೆ ಬಂದ್ರಿ. ಮುಂಚೆ ರಜಾ ಇದ್ರೂ ಕಛೇರಿಗೆ ಹೋಗಿ ಬಂದ್ರೋ, ಅಥವಾ ಯಾರಾದರೂ ಸತ್ರೋ? ಏನೋ ನನಗೇನಂತೆ. ಮಲಕ್ಕೊಂಡಾದ್ರೂ ಮಲಕ್ಕೊ ಬನ್ನಿ ಒಂದಿಷ್ಟು.

**ಆತ** :— (ಬೆಚ್ಚಿ) (ಮಂಚವನ್ನು ತೋರಿಸುತ್ತಾ) ಅಲ್ಲಿ!

**ಆಕೆ** :— ಏನು, ನಾನಿದ್ರೆ ನೀವು ಮಲಕ್ಕೊಬಾರದೇನು. ನನ್ನ ಜತೆ ಇರುವು ದಕ್ಕೆ ನಾಚಿಕೆಯೇನೋ. ಅಯ್ಯೋ ಪಾಪ! ಹೊಸದಾಗಿ ಗಂಡನ ಮನೆಗೆ ಬಂದ ಹುಡುಗಿ ಹಾಗೆ ಮಾಡ್ತೀರಲ್ಲ ಅಂತೀನಿ. ಮದುವೆ ಏಕೆ ಮಾಡಿ ಕೊಂಡರಿ, ನನ್ನ ಕಂಡರೆ ನಾಚಿಕೆಯಾದ್ರೆ. ಅತ್ತಿಗೆ ಮನೆಗಾದ್ರೂ ಹೋಗಿ ನೋಡಿಕೊಂಡು ಬನ್ನಿ ಗಂಡ ಹೆಂಡತಿ ಹೇಗಿರಬೇಕು ಅಂತ.

**ಆತ** :— ಗೊತ್ತು.

ಆಕೆ :— ಗೊತ್ತಿದ್ದರೆ ಹೀಗ್ಯಾಕೆ ಆಡುತ್ತಿದ್ದಿರಿ. ಗೊತ್ತಿದ್ರೆ ಹೋದ ಭಾನು ವಾರ ನಿಮ್ಮ ಪಾಡಿಗೆ ನೀವು ಇಲ್ಲಿ ಬಂದು ಬಿದ್ದುಕೊಳ್ಳುವದರ ಬದಲು ವರಾಂಡದಲ್ಲಿ ಈಜಿಛೇರ್ ಮೇಲೆ ಯಾಕೆ ತೂಕಡಿಸುತ್ತಾ ಕೂತು ಕೊಳ್ಳುತ್ತಿದ್ದಿರಿ. ನಾನೇನು ನೋಡಲಿಲ್ಲಾ ಅಂತ ತಿಳಿದುಕೊಂಡಿರಾ? ನಾನಿದ್ದಾಗ ನೀವು ಈ ಕೋಣೇಲಿ ಸುಳಿಯುವುದಿಲ್ಲ.

ಆತ :— ಕಾಫಿ?

ಆಕೆ :— ಇಷ್ಟು ಜಾಗ್ರತೆ ಏಕೆ ಕಾಫಿ. ದಿನಾಗ್ಲು ಇಷ್ಟು ಹೊತ್ತಿಗೆ ಬಂದು ಕುಡಿತಿದ್ದಿರಾ? ಅಥವಾ ನನ್ನ ಉಪಾಯ ಮಾಡಿ ಎಬ್ಬಿಸಿ ಕಳುಹಿಸ ಬೇಕು ಅಂತ ಕಾಫಿ ಕೇಳಿದಿರಾ. ನಿಮ್ಮ ಉಪಾಯ ಏನೂ ನಡೆಯುವು ದಿಲ್ಲ ಅಂದ್ರೆ. ನೀವಂತು ಮಲಗುವುದಿಲ್ಲ. ನಾನಾದ್ರು ಒಂದಿಷ್ಟು ಕಣ್ಣು ತುಂಬ ನಿದ್ದೆ ಮಾಡ್ತೇನೆ. ರಾತ್ರಿ ನಿಮ್ಮ ಗೊರಕೆ ಗಲಾಟೆಗೆ ನಿದ್ದೇನೆ ಬರೋದಿಲ್ಲ. ಆ ಮೇಲೆ, ಒಳಗಡೆ ಹೋಗಿ ಒಳಗಿಟ್ಟಿರುವ ಕಾಫಿ ಎಲ್ಲಾ ನಿಮ್ಮ ಗಂಟಲಲ್ಲಿ ಗಟಗಟ ಅಂತ ಸುರಿದುಕೊಳ್ಳಬೇಡಿ, ಮೊನ್ನೆ ಬೆಳಗ್ಗೆ ಮಾಡಿದ ಹಾಗೆ.

ಆತ :— ಕುಡಿದಿಲ್ಲಾ ಅಂತ ಯಾರಿಗೆ ಗೊತ್ತಿತ್ತು.

ಆಕೆ :— ಕೇಳಬೇಡವೆ? ದಿನಾಗ್ಲು ನೀವು ಕುಡಿಯುವುದಕ್ಕಿಂತ ಜಾಸ್ತಿ ಇದ್ದರೆ, ತಿಳಿಯುವುದಿಲ್ಲೆ. ನಿಮಗೆ ಇವೆಲ್ಲಾ ಎಲ್ಲಿ ಗೊತ್ತಾಗುತ್ತೆ. ಕಛೇರಿಗೆ ಹೋಗೋದು, ಮನೆಗೆ ಬರೋದು, ಊಟ ಮಾಡೋದು, ಗೊರಕೆ ಹಾಕೋದು, ಇಷ್ಟೆ ಗೊತ್ತಾಗೋದು. ನನ್ನ ಹಣೆಯ ಬರಹ ಅಷ್ಟೆ. ದುಡಿದೂ ದುಡಿದೂ ಸಾಯುವುದು. ಬರುತ್ತಾ ರವೆ ತನ್ನಿ ಅಂತ ರೂಪಾಯಿ ಕೊಟ್ಟಿದ್ದೆನಲ್ಲ, ತಂದ್ರಾ?

ಆತ :— ತಂದೆ. ರವೆ ಏಕೆ?

ಆಕೆ :— (ಪ್ರಶ್ನೆ ಕೇಳುವಷ್ಟು ದಿಟ್ಟತನ ಆತನಿಗೆ ಬಂದಿತೆ ಎಂದು ಆತನನ್ನು ಬಿರಿ ಬಿರಿ ನೋಡುತ್ತಾ) ತಂದಿದ್ದೀರಾ ಅಂತ ಕೇಳಿದರೆ ಉತ್ತರ ಹೇಳಿ ಸುಮ್ಮ ನಾಗುವುದು ಬಿಟ್ಟು, ಏಕೆ ಅಂತ ಕೇಳುವುದು ನೋಡಿ. ಕೇಳಿದಷ್ಟು ಹೇಳೋಣವೇ ಇಲ್ಲ. ತಿಳಿದುಕೊಳ್ಳಿ, ರವೆ ಯಾಕೆ ಅಂತ; ಸಂಜೆಗೆ ಉಪ್ಪಿಟ್ಟು ಮಾಡಬೇಕು. ಇವತ್ತು ಸಂಜೆ ಪಂಕಜಮ್ಮ ಬರುತ್ತಾಳೆ,

ನಮ್ಮ ಮನೆಗೆ. ಪಂಕಜಮ್ಮ ಯಾರು ಗೊತ್ತೆ. ಹಿಂದೆ ಈ ಊರಿನಲ್ಲಿ ಹೆಡ್ ಗುಮಾಸ್ತರಾಗಿದ್ದರಲ್ಲ—

**ಆತ**:— ಪಂಕಜಮ್ಮ ಹೆಡ್‌ಗುಮಾಸ್ತರಾಗಿದ್ದರೆ!

**ಆಕೆ**:— ನಿಮ್ಮ ತಲೆ. ನಿಮ್ಮ ಬುದ್ಧಿಗೆ ಏನು ಕೊಟ್ರೂ ತೀರದು. ಅದಕ್ಕೆ ಈಗ ಮೂರು ವರ್ಷದಿಂದ ನಿಮಗೆ ಸಂಬಳ ಬಡ್ತಿ ಮಾಡೋದು ನಿಲ್ಲಿಸಿರುವುದು. ಅಲ್ಲ, ನಿಮಗೆ ಇನ್ನೂ ಕೆಲಸದಿಂದ ವಜಾ ಆಗದೇ ಇರೋದು ಹೆಚ್ಚು ಅಂತೀನಿ, ನಿಮ್ಮ ಬುದ್ಧಿಗೆ. ನಾನೇನಾದರೂ ನಿಮ್ಮ ಆಫೀಸರು ಆಗಿದ್ದರೆ—

**ಆತ**:— (ನಡುಗಿ) ಸದ್ಯ ಸದ್ಯ

**ಆಕೆ**:— ನಿಮ್ಮ ಗ್ರಹಚಾರ ನೆಟ್ಟಗಿದೆ ಅಂತ ಎಲ್ಲಾ ಸರಿಯಾಗ್ತಾ ಇದೆ ಅಷ್ಟೆ. ತಿಳಿದುಕೊಳ್ಳಿ; ಹೆಡ್ ಗುಮಾಸ್ತರ ಹೆಂಡತಿ ಪಂಕಜಮ್ಮ ಅಂತ ಇದ್ದರು, ಈ ಊರಲ್ಲಿ. ಆಕೆ ನನ್ನ ಜತೆಯವಳು. ಈಗ ಏನೋ ಈ ಊರಿಗೆ ಬಂದಿದ್ದಾರೆ. ಮನೆಗೆ ಬನ್ನಿ ಅಂತ ಕರೆದೆ. ಗಂಡನನ್ನ ಹಿಂದೆ ಕರೆದುಕೊಂಡು ಬರುತ್ತಾಳಂತೆ. ಆಕೆ ಯಾರು ಗೊತ್ತಾಗಲಿಲ್ವೆ; ನಮ್ಮ ತಾಯಿ ದೊಡ್ಡಪ್ಪನ—

**ಆತ**:— (ಸರಸರನೆ) ತಿಳೀತು, ತಿಳೀತು.

**ಆಕೆ**:— ಬಹಳ ದಿವಸ ಆಯ್ತು ಅವಳ ಮುಖ ನೋಡಿ. ದೇವರ ದಯ, ಇಲ್ಲದಿದ್ದರೆ ಇನ್ನ ಅವಳ ಮುಖ ಎಲ್ಲಿ ಸಿಗುತಿತ್ತು. ಆವಾಗ ನಾವು ಜತೇಲಿ ಓದುತ್ತಿದ್ದೆವು. ಒಂದು ದಿನ ಅವಳು ಟಾಂಗಾದಲ್ಲಿ ಹೋಗುತ್ತಿದ್ದಾಗ, ಟಾಂಗ ಉರುಳಿ ಬಿದ್ದು—

**ಆತ**:— ಗೊತ್ತು ಗೊತ್ತು.

**ಆಕೆ**:— ಯಾಕೋ, ನಾನು ಮಾತಾಡಿದ್ರೆ ಬೇಜಾರು ಅಂತ ಕಾಣುತ್ತೆ, ನಿಮಗೆ. ನಾನು, ನನ್ನ ಮನೆ ವಿಷಯ, ನನ್ನ ಸ್ನೇಹಿತರು ಅಂದರೆ ಬೇಕೇ ಇಲ್ಲ ನಿಮಗೆ. ನಮ್ಮ ವಿಚಾರ ನಿಮ್ಮ ಕಿವಿಗೆ ಬಿದ್ದರೆ, ಸೀಸ ಕಾಸಿ ಕಿವಿಗೆ ಹಾಕಿದ ಹಾಗೆ ಆಗುತ್ತೇನೋ. ಹೋಗ್ಲಿ ಬಿಡಿ ಅಂದ್ರೆ. ಸಂಜೆ ಮನೇಲಿ ಇರಿ. ನಮ್ಮಿಬ್ಬರನ್ನು ನೋಡಬೇಕು ಅಂದರು.

**ಆತ**:— ಫೋಟೋ— ತೋರಿಸಿಬಿಡು.

ಆಕೆ :— ನಾವಿಬ್ರೂ ಒಟ್ಟಿಗೆ ಇರುವ ಒಂದು ಫೋಟೋ ಆದ್ರೂ ತೆಗೆಸಿದ್ದೀರಾ, ನಿಮ್ಮ ಮುಖಕ್ಕೆ. ಎಲ್ಲರೂ ಎಷ್ಟೆಷ್ಟು ಸಲ ಒಟ್ಟೊಟ್ಟಿಗೆ ಕೂತು ಕೊಂಡು ಫೋಟೋ ತೆಗೆಸಿಕೊಳ್ಳುತ್ತಾರೆ. ನಾವಿಬ್ರೂ ಒಂದುಸಲ ಆದ್ರೂ, ಒಂದು ಕನ್ನಡಿ ಮುಂದಾದರೂ ಕೂತಿದ್ದೇವೆಯೆ? ಎಲ್ಲಾ ಅವರವರ ಅದೃಷ್ಟ ಅಂದ್ರೆ. ಹೋಗ್ಲಿ ರವೆ ತಂದು ಮಿಕ್ಕ ಚಿಲ್ರೆ ಕೊಡಿ. ಕೇಳದೆ ಇದ್ರೆ ಕೊಡೋದೆ ಬೇಡ್ವೆ? ನೀವಾಗೆ ಕೊಡುತೀರೇನೋ ನೋಡೋಣ ಅಂತ ನಾನು ಸುಮ್ಮನೇ ಇದ್ದೀನಿ. ಚಿಲ್ರೆ ಅಂದಿದ್ದು ನೆನಪಿಗೆ ಬಂತು, ಬೆಳಗ್ಗೆ ನೀವು ನೋಡಿದಾಗ ನನ್ನ ಕಬ್ಬಿಣದ ಪೆಟ್ಟಿಗೆ ಬಾಗಿಲು ತೆಗೆದಿತ್ತೇ?

ಆತ :— (ಕಳ್ಳತನದಿಂದ) ಇಲ್ಲ— ಹೂಂ.

ಆಕೆ :— ತೆಗೆದು ನೋಡಿದ್ರಾ, ಬೀಗ ಹಾಕಿದೆಯೋ ಇಲ್ಲವೋ ಅಂತ.

ಆತ :— (ತಬ್ಬಿಬ್ಬು ಆಗಿ) ಇಲ್ಲ—ಇಲ್ಲ

ಆಕೆ :— ಇಲ್ಲ. ಬೀಗ ಹಾಕೋದು ಮರೆತು ಬಿಟ್ಟೆ ಅಂತ, ನಾನಿಲ್ಲದಿದ್ದಾಗ ಹೊಂಚುಹಾಕಿ ದುಡ್ಡು ಹೊಡಿಯೋದೆ! ನಿನ್ನೆರಾತ್ರೆ ಐವತ್ತು ರೂಪಾಯಿ ಇಟ್ಟಿದ್ದೆ, ನೀವು ಊಟ ಮಾಡಿಕೊಂಡು ಕಛೇರಿಗೆ ಹೋದಮೇಲೆ ನೋಡುತ್ತೇನೆ, ಏನಿದೆ ಅಲ್ಲಿ. ಏನಾಯ್ತು ಅಂದ್ರೆ ದುಡ್ಡೆಲ್ಲಾ?

ಆತ :— ಕೋಟು.

ಆಕೆ :— ಯಾಕೆ ಬೇಕಾಗಿತ್ತು ಕೋಟು ನಿಮಗೆ. ಈಗ ಎರಡು ಇರೋದು ಸಾಲ್ದೆ

ಆತ :— ಸರ್ಜಿಂದು

ಆಕೆ :— ಇದಕ್ಕೇ ನಿಮ್ಮ ಹತ್ತಿರ ದುಡ್ಡು ಇರಬಾರದು ಅನ್ನುವುದು. ಐವತ್ತು ರುಪಾಯನ್ನು ತಗೊಂಡು ಹೋಗಿ. ಒಂದು ಕೋಟಿಗೆ ಹಾಳು ಮಾಡಿದ್ದೀರಲ್ಲ, ಆದೂ ಕದ್ದುಕೊಂಡು ಹೋಗಿ. ನಿಮಗೆ ಬುದ್ಧಿ ಕಲಿಸಬೇಕು, ತಾಳಿ. ಇನ್ನು ಮೇಲೆ, ನಿಮಗೆ ಆಫೀಸಿನಲ್ಲಿ ಕಾಫಿಗೆ ಅಂತ ನಿಮ್ಮ ಹತ್ತಿರ ತಿಂಗಳಿಗೆ ಐದೈದು ರೂಪಾಯಿ ಕೊಡುವುದು ಹತ್ತು ತಿಂಗಳು ನಿಲ್ಲಿಸಿ ಬಿಡುತ್ತೇನೆ.

ಆತ :— ಕೋಟುಗಳು ಹರಿದಿತ್ತು.

ಆಕೆ:— ಹರಿದಿದ್ರೆ ? ನನ್ನ ಕೇಳಬಾರದಿತ್ತೇನು. ತ್ಯಾಪಿ ಹಾಕಿಸಿ ಕೊಡು ತ್ತಿದ್ದೆ. ಅದರ ಬದಲು ಐವತ್ತು ರುಪಾಯಿ..ದು ಸರ್ಜಿನ ಕೋಟೇ ನಿಮಗೆ ಬರುವ ಸಂಬಳಕ್ಕೆ? ನಿಮಗೆ ಬೇಕು ಬೇಕಾದ್ದೆಲ್ಲ ಹೀಗೆ ಮಾಡಿಕೊಂಡು ಬಿಡುತ್ತೀರಿ. ನನಗೆ ತಾನೆ ಕಷ್ಟ. ನನಗೆ ಬೇಕಾದ್ದು ಒಂದೂ ಆಗೊಲ್ಲ. ಸಿನಿಮಾಕ್ಕೆ ಹೋಗುತ್ತೇನೆ, ಹಿಂದೆ ಬನ್ನಿ ಅಂದರೆ, ಸಾಹೇಬರು ಹೇಳಿ ಕಳುಹಿಸಿದ್ದಾರೆ ಅಂತ ನೆವ ಹಾಕಿಬಿಡು ತ್ತೀರಿ. ಲಾಲ್‌ಬಾಗಿಗೆ ವಾಕಿಂಗು ಆದ್ರು ಹೋಗುತ್ತೇನೆ, ಹಿಂದೆ ಬನ್ನಿ ಅಂದ್ರೆ ಅವತ್ತು ಕಛೇರಿಯಿಂದ ಬರುವಾಗಲೆ ರಾತ್ರೆ ಒಂಭತ್ತು ಗಂಟೆ ಮಾಡುತ್ತೀರಿ. ಅಂತು ನಾನು ಬೇಡ ನಿಮಗೆ.

ಆತ :— ಉಂಟೆ, ಉಂಟೆ !

ಆಕೆ :— ಏನೋ ನಾನು ಹಚ್ಚಿಕೊಂಡು ಹೋಗುತ್ತಾ ಇದ್ದೀನಿ ಅಂತ ನಡಿತಾ ಇದೆ, ಅಷ್ಟೆ. ಇಲ್ಲದಿದ್ದರೆ ನಿಮ್ಮ ಸಂಸಾರ ಹೇಗೆ ಜರುಗು ತ್ತಿತ್ತೋ ನಾನು ಬೇರೆ ಕಾಣೆ. ಪ್ರತಿತಿಂಗಳು ಒಂದನೇ ತಾರೀಖು ನಿಮಗೆ ಬರುವ ಸಂಬಳಾನ ಸುಲಿದುಕೊಳ್ಳದೆ ಇದ್ದರೆ, ನೀವು ಇಷ್ಟು ಹೊತ್ತಿಗೆ ಕೈಲಿ ಚಿಪ್ಪು ಹಿಡಿದುಕೊಳ್ಳಬೇಕಾಗುತ್ತಿತ್ತು.

ಆತ :— ದೇವರಿಗೆ ಗೊತ್ತು, ಕಣೆ.

ಆಕೆ :— ಸಂಜೆ ಅವರು ಮನೆಗೆ ಬಂದಾಗಲಾದರೂ ಲಕ್ಷಣವಾಗಿ ಒಂದಿಷ್ಟು ಮಾತಾಡಿ. ಬಾಯಿಗೆ ಬೀಗ ಹಾಕಿಕೊಂಡು, ನವರಾತ್ರೆ ಗೊಂಬೆ ಹಾಗೆ ಅವರ ಮುಂದೆ ಮಿಕ ಮಿಕ ಅಂತ ಮಂಕಾಗಿ ಕುಳಿತಿರಬೇಡಿ. ಒಂದು ಜರತಾರಿ ಪಂಜೆ ತೆಗೆದುಕೊಡುತ್ತೇನೆ. ಅವರು ಬರುವ ಹೊತ್ತಿಗೆ ಅದನ್ನು ಉಟ್ಟುಕೊಂಡಿರಿ. ಆ ಮೇಲೆ ಅವರೆದುರಿಗೆ ನನ್ನ ಜತೆ ಸರಿಯಾಗಿ ಮಾತಾಡುತ್ತಾ ಇರಿ. ಇಲ್ಲದಿದ್ದರೆ ನಾವು ಜಗಳ ಆಡಿದ್ದೀವಿ ಅಂತ ತಿಳಿದುಕೊಂಡಾರು.

ಆತ :— ಏನೀಗ.

ಆಕೆ :— ಅಷ್ಟೆ. ನಿಮಗೇನು. ಹೋದ್ರೆ ನನ್ನ ಮರ್ಯಾದೆ ಹೋಗುತ್ತೆ ಅಷ್ಟೆ. ನಿಮಗೇನಾದ್ರೂ ಮರ್ಯಾದೆ ಇದ್ದರೆ ತಾನೆ, ಯೋಚನೆ.

ಆತ :— ಮಿಗಿಸಿದ್ದರೆ ತಾನೆ.

ಆಕೆ :— ಇದ್ದರೆ ತಾನೆ ಮಿಗಿಸುವುದು. ಈ ಜಾಣತನದ ಮಾತು ಸಾಕು ಅಂದ್ರೆ. ನೋಡಿದವರು, ಪಾಪ ಮಾತೇ ಬರೋದಿಲ್ಲ, ಅಂತ ತಿಳಿದು ಕೊಳ್ಳಬೇಕು. ಇವತ್ತು ಸಂಜೆ ಪಂಕಜಾನ ಜತೆ ನಾನೂ ಸಿನಿಮಾಕ್ಕೆ ಹೋಗುತ್ತೇನೆ. ಆಕೆ ಗಂಡನ ಜತೆಗೆ ನೀವೂ ಹಿಂದೆ ಬನ್ನಿ.

ಆತ :— ಕೆಲಸ ಇದೆ; ಹೋಗಬೇಕೇ.

(ಹೊರಗಡೆ "ರಾಯರೇ" ಅಂತ ಯಾರೋ ಕೂಗುತ್ತಾರೆ)

ಆಕೆ:— ಬಂದ ಆಗ್ಲೆ, ಶನಿ ವಕ್ರಿಸಿದ ಹಾಗೆ. ಏಕೆ ಎದ್ರಿ ? ಕೂಡ್ರಿ. ಕೆಲಸ ಅಂತ ಕೆಲಸ. ಹೊರಗೆ ಹೋಗಕೂಡದು ಇವತ್ತು. ನನ್ನ ಹಿಂದೆ ಸಿನಿಮಾಕ್ಕೆ ಬರಬೇಕು.

ಆತ :— (ಕೈ ಉಜ್ಜಿಕೊಳ್ಳುತ್ತ) ಖಂಡಿತ, ಹೋಗಲೇಬೇಕೇ.

ಆಕೆ :— ಕೂತಿರಿ ಅಂದ್ರೆ ನನಗೆ ಗೊತ್ತಿದೆ ನಿಮ್ಮ ವಿದ್ಯಾ. ನಾನು ಹೋಗಿ ನೀವು ಮನೇಲಿಲ್ಲ ಅಂತ ಹೇಳಿಬಿಟ್ಟು ಬರ್ತೀನೆ. ಅಷ್ಟು ಹೊತ್ತಿಗೆ ನೀವು ಒಳಗೆ ಹೋಗಿ ಒಂದು ಲೋಟ ಕಾಫಿ ಕುಡಿದು ನನಗು ಒಂದು ಲೋಟ ತಂದುಕೊಡಿ. (ಹೊರಗಡೆ "ರಾಯರೇ" ಅಂತ ಬಹಳ ಗಟ್ಟಿಯಾಗಿ ಕೂಗುತ್ತಾರೆ. )

(ಆಕೆ ಎದ್ದು ವರಾಂಡದ ಬಾಗಿಲನ್ನು ತೆಗೆದುಕೊಂಡು ಹೊರಗೆ ಹೋಗುತ್ತಾಳೆ. ಆತ ನಿಟ್ಟುಸುರು ಬಿಟ್ಟು ನಿಧಾನವಾಗಿ ಒಳಗೆ ಹೋಗುತ್ತಾನೆ.)

ಬಿ. ಕೆ. ರಾಮಚಂದ್ರರಾಯರು
ಚಿತ್ರದುರ್ಗ

———

# ಸತ್ಯವಂತರಾಯ

## ಸ್ಥಳ—ಪಡಸಾಲೆ

[ಸತ್ಯವಂತರಾಯ ತನ್ನ ಪರ್ಸಿನೊಳಗಿನ ದುಡ್ಡು ಟೇಬಲ್ ಮೇಲೆ ಸುರುಹಿ, ಸಣ್ಣ ನೋಟಬುಕ್ಕಿನಲ್ಲಿ ಖರ್ಚಿನ ವಿವರಣೆ ಬರೆಯುತ್ತ ನಿಂತಿದ್ದಾನೆ. ದುಡ್ಡು ಎಣಿಸಿ]

**ಸತ್ಯ:**— ನಮ್ಮೆಲ್ಲ ಭಾಂಡವಲು ಅಂದರ ಒಂದು ರೂಪಾಯಿ, ಒಂಭತ್ತಾಣೆ, ಒಂಭತ್ತು ಪೈ. ಇನ್ನೂ ಸಂಬಳ ಬರಲಿಕ್ಕೆ ನಾಲ್ಕು ದಿವಸವ. ಇಷ್ಟರಾಗ ಈ ನಾಲ್ಕು ದಿವಸ ಕಳೀಬೇಕು ಅಂದರ ಕಣ್ಣೀರು ಕಪಾಳಕ್ಕ ಬರ್ತಽದ ಗುಡ್ಡ ಜಿಳೆದು ಮೂರು ದಿನ ಆತ್ಯು. ಬ್ಲೇಡು ತರಬೇಕು-ಮನ್ಯಾಗ ಕಟಿಗಿ ತೀರ್ಯಾವ ಅಂತ ನಿನ್ನೇ ಊಕಿ ಹೇಳ್ಯಾಳು! ಇನ್ನೂ ಏನೇನು ತೀರೇದಽ ಅಂತ ಹೇಳ್ತಾಳೊ ಯಾರು ಬಲ್ಲರು? ಇದು ಹಾಂಗಿರಲಿ. ಮೂರು ತಿಂಗಳಾತು—ಅಗಸರಂವಗ ಕೊಟ್ಟಿಲ್ಲ. ಅಂವ ಯಾವಾಗ ಬಂದು ಜಗಿ ಕೂಡ್‌ತಾನೊ ಗೊತ್ತಿಲ್ಲ. ಅಂವಗ—ಅಂವಗ ಈ ತಿಂಗಳು ಚಕ್ರಾನಽ ಕೊಡಬೇಕು. ಈ ಕೊನೀ ನಾಲ್ಕು ದಿವಸದಾಗ ನಾ ಸುಳ್ಯಾಡಿದಷ್ಟು ಇಡೀ ತಿಂಗಳದಾಗಽ ಆಡತಿರಲಿಕ್ಕಿಲ್ಲ. ಮಾಡೋದೇನು?

[ಒಳಗಿನಿಂದ ಅವನ ಎರಡು ಮಕ್ಕಳ ಅಳುವ ದನಿ ಕೇಳಬರುತ್ತದೆ. ಹಣ ಪರ್ಸಿನಲ್ಲಿಟ್ಟು, ಪರ್ಸೂ ನೋಟ್‌ಬುಕ್ಕೂ ಕಪಾಟಿನಲ್ಲಿಡಬೇಕೆಂದು ಒಳಗೆ ಹೋಗುತ್ತಾನೆ. ನಡುಮನೆಯಲ್ಲಿ ಸಾವಿತ್ರೀಬಾಯಿ ಹೆರಳು ಹಾಕಿಕೊಳ್ಳುತ್ತಾಳೆ. ನೆರೆಮನೆಯ ರಂಗಪ್ಪನ ಮಕ್ಕಳು—ಒಂದರ ಹೆಸರು ಶಾರದಾ—ವಯಸ್ಸು ೩ ವರ್ಷ—ಇನ್ನೊಂದರ ಹೆಸರು ಮಾಧವ ವಯಸ್ಸು ೭ ವರ್ಷ—ಮೆಲ್ಲನೆ ನಡುಮನೆಯಲ್ಲಿ ಬಂದು ಸತ್ಯವಂತರಾಯನ ಮಕ್ಕಳ ಹತ್ತಿರ ಕೂಡುತ್ತವೆ. ಅವನ ಮಕ್ಕಳೆರಡೂ—ಒಂದು ಅರವಿಂದ-ಇನ್ನೊಂದು ಶಾಲಿನಿ—ವಯಸ್ಸು ಸುಮಾರು ರಂಗಪ್ಪನ ಮಕ್ಕಳಷ್ಟೇ. ತಿಂಡಿ ಕೊಡೆಂದು ಹಟಮಾಡುತ್ತಿವೆ ಸತ್ಯವಂತರಾಯ ಕಣ್ಣು ಹಿಗ್ಗಿಸಿ, ಗೋಣು ಅಲ್ಲಾಡಿಸಿ ರಂಗಪ್ಪನ ಮಕ್ಕಳಿಗೆ 'ಹೋಗರಿ' ಎಂದು ಸನ್ನೆ ಮಾಡುತ್ತಾನೆ. ಅವು ತನ್ನ ಮಕ್ಕಳ ಹಿಂದೆ ಮರೆಯಾಗಿ ಕೂಡುತ್ತವೆ; ಹೋಗುವದಿಲ್ಲ. ಅದನ್ನು ನೋಡಿ, ಹೆಂಡತಿಗೆ]

**ಸತ್ಯ** :— ಯಾವ ಹೊತ್ತಿನಿಂದ ಮಕ್ಕಳ್ನ ಅಳಸ್ತಾ ಇದ್ದೀ. ಅವಕ್ಕ ತಿಲ್ಲಿಕ್ಕೆ ಕೊಡೋದಿದ್ದರ ಲಗೂ ಕೊಟ್ಟಿರಾತ್ತ್ಯು. ಅಳಸೋದೇನು ಪ್ರೀತ್ಯೊ ನಿಮಗ. ಇನ್ನ ನೋಡು, ಇವೆರಡು ಹುಡುಗರು ಬ್ಯಾರೆ ಬಂದು ಕೂತಾವ—ಇವಂತೂ ಶನಿ ಗಂಟುಬಿದ್ಹಾಂಗ ಗಂಟುಬಿದ್ದಾವ –ಕಣ್ಣುತಪ್ಪಿಸಿ ಮಕ್ಕಳಿಗೇನಾದರೂ ಕೊಡೋಣ ಅಂದರ ಸಾಧ್ಯಾನsa ಇಲ್ಲ—ಬಿಸ್ಕಿಟಿನ ಪೊಟ್ಟ ತಂದು ಎರಡು ದಿನ ಆತ್ತ್ಯು. ಈಗ ಒಡದು ಕೊಡೋಣ ಅಂದರ ಎಲ್ಲಾರಿಗೂ ಕೊಡಬೇಕು. ಒಂದs ದಿವಸದಾಗ ಎಲ್ಲ ಝಾಡಿ; ಒಂದು ಬಿಸ್ಕೀಟು ಅಂದರ ಅರ್ಧಾಣೆ ಹೋಗ್ತsದ– ಈ ಮಕ್ಕಳದೇನು ಗಂಟು ಹೋತ್ತ್ಯು? ಅಲ್ಲಾ, ತಮ್ಮ ಮಕ್ಕಳಿಗೆ ಇವರಿಗೆ ಮನೀವಳಗ ತಿಂಡೀ ಕೊಡಲಿಕ್ಕೇನಾತ್ತ್ಯು? ಮಕ್ಕಳ್ನ ಹಡೀ ಲಿಕ್ಕೆ ಮಾತ್ರ ಬೇಕು. ಅವಕ್ಕ ತಿಲ್ಲಿಕ್ಕೆ ಕೊಡಲಿಕ್ಕೆ ಬ್ಯಾಡ!! ಎಲ್ಲಾ ಮಂದೀ ಮನ್ಯಾಗs ಆಗಬೇಕು ಅಂದರ ಹ್ಯಾಂಗ? ಈಗ ನಮ್ಮ ಹುಡುಗರು—ಇವರ ಮನೀಗೆ ಹೋಗ್ತಾವೇನು? ಹೋದರೂ ಈ ಮಕ್ಕಳು ಏನಾದರೂ ತಿಂಬೋದು ಉಂಬೋದ ಇದ್ದರ ನಮ್ಮ ಹುಡುಗರಿಗೆ ಪತ್ತೆ ಹಚ್ಚಿಕೊಟ್ಟರ ಹೌದಲ್ಲೊ? ಏ ಮಾಧ್ಯಾ ನಿಮ್ಮಪ್ಪ ಕರಧಾಂಗಾತ್ತ್ಯು ನೋಡು, ಹೋಗು!

**ಮಾಧ್ಯಾ** :— ನಮ್ಮಪ್ಪ ಪ್ಯಾಟ್ಯಾಗ ಹೋಗ್ಯಾನ.

**ಸತ್ಯ** :— ಅಲ್ಲೇ ಸಾಯನ್ನು! ಬಂದಿದ್ದಾನು ನೋಡು.

**ಮಾಧ್ಯಾ** :— ಈಗ ಹೋಗ್ಯಾನ.

**ಸಾವಿತ್ರಿ** :— ಅವು ಹೋಗೋದುಲ್ಲ; ಕೂತಿರವಲ್ಲವ್ಯಾಕ. ಹುಡುಗರು— ಅವಕ್ಕೇನು ತಿಳೀತದ?

**ಸತ್ಯ** :— ತಿಂಬೋದು ಮಾತ್ರ ತಿಳೀತದೇನೊ? ನಮ್ಮ ಹುಡುಗರು ಅವರ ಮನೀಗೆ ಹೋದರ ಕೊಡ್ತಾರೇನು ಬೋ ... ಮಕ್ಕಳು!

**ಸಾವಿತ್ರಿ** :— ಕೊಟ್ಟsಕೊಡ್ತಾರ. ಆದರ ಮೊದಲು ನಮ್ಮ ಹುಡುಗರು ಮಂದೀ ಮನಿ ತಿನಸಿಗೆ ಆಶಿ ಮಾಡೋದು ಇಲ್ಲ.

[ ಶಾಲಿನಿ 'ಬಿಸ್ಕೀಟ ನಂಗ'—'ಕೊಡsss ನಂಗ ಬಿಸ್ಕೀಟು' ಎಂದು ತಾಯಿಗೆ ತೆಕ್ಕೆಬಿದ್ದು ಅಳುತ್ತದೆ. ಅರವಿಂದ ಮಾಧವನಿಗೆ 'ಮನೀಗೆ ಹೋಗು' ಎಂದು ಸನ್ನೆಮಾಡಿ ಹೇಳುತ್ತಾನೆ. ಅವನು ಸುಮ್ಮನೆ ಕೂಡುತ್ತಾನೆ. ]

**ಸತ್ಯ** :— ಏ ಮಾಧ್ಯಾ, ಈಗ ಶಾಲಿನಿ ಮತ್ತು ಅರವಿಂದ ನನ್ನ ಸಂಗತಿ ಪ್ಯಾಟ್ಯಾಗ ಬರ್‍ತಾರ—ಅವರಿಗೆ ಅಂಗಿ ಹೊಲಿಸಬೇಕು. ನೀವು ಹೋಗ್ರಿ ನಿಮ್ಮ ಮನೀಗೆ—ಊಟ ಮಾಡಿಕೊಂಡು ಬರ್ರಿ.

**ಮಾಧ್ಯಾ** :— ನಮ್ಮನ್ಯಾಗ ಇನ್ನೂ ಅಡಿಗಿ ಆಗಿಲ್ಲ.

**ಸತ್ಯ** :— (ಅಣಕಿಸಿ) ಉಂ, ಆಗಿಲ್ಲ. ಹೊರಗ ಸಿನೆಮಾದ ಬ್ಯಾಂಡು ಬಾರಸ್ತದ ನೋಡು, ಹೋಗು. ಗಾಡೀಮ್ಯಾಲೆ ದೊಡ್ಡ ದೊಡ್ಡ ಗೊಂಬಿ ಕಟ್ಯಾರ ನೋಡು, ಹೋಗು. ಹೋಗs ಶಾರಿ! ಅಣ್ಣ ಹೋಗ್ತಾನ ನೀನೂ ಹೋಗು.

[ಎಲ್ಲ ಹುಡುಗರು ಹೋಗಹತ್ತುತ್ತವೆ. ಸತ್ಯವಂತರಾಯ ತನ್ನ ಎರಡೂ ಮಕ್ಕಳಿಗೆ ಹೋಗಬೇಡಿರೆಂದು ಸನ್ನೆ ಮಾಡುತ್ತಾನೆ. ಅದನ್ನು ಮಾಧವ ನೋಡಿ 'ಹುಳ್ಳಹಳ್ಳ' ಎನ್ನುತ್ತಾನೆ— ಎದ್ದ ಹುಡುಗರು ಮತ್ತೆ ಕೂತು ಬಿಡುತ್ತವೆ. ಸಾವಿತ್ರಿಬಾಯಿ ಹೆರಳು ಮುಗಿಸಿ, ಎದ್ದು ಹೋಗಿ ಒಳಗಿಂದ ಹಿತ್ತಾಳೆ ಡಬ್ಬಿ ತರುತ್ತಾಳೆ—ಹುಡುಗರೂ ಅವಳನ್ನು ಹಿಂಬಾಲಿಸಿ ಹೊರಗೆ ಬಂದು ಅವಳ ಸುತ್ತು ನಿಲ್ಲುತ್ತವೆ—ಸತ್ಯವಂತರಾಯ ತುಸು ಮುಂದಕ್ಕೆ ಬಂದು]

**ಸತ್ಯ** :— ಏನಾದರೂ ಕೈಯಾಗ ಇಟ್ಟಾಂಗಮಾಡಿ ಅವನ್ನ ಅಟ್ಟಿಬಿಡು ಹೋಗಲಿ ಸಾಡೇಸಾತಿ.

[ ಸಾವಿತ್ರೀಬಾಯಿ ಉಂಡಿಯಡಬ್ಬಿಯನ್ನು ತೆರೆದು ಒಂದೊಂದು ಉಂಡಿಯನ್ನು ತನ್ನ ಮಕ್ಕಳ ಕೈಯಲ್ಲಿಡುತ್ತಾಳೆ. ಅದರಲ್ಲಿಯೇ ಸಣ್ಣ ಎರಡು ಉಂಡಿ ಆರಿಸಿ ಮಾಧವಾ—ಶಾರಿಗೆ ಕೊಡಬೇಕೆನ್ನುವಷ್ಟರಲ್ಲಿ ]

**ಸತ್ಯ** :— ಅವಕ್ಕ ಒಂದೊಂದು ಉಂಡಿ ಯಾಕ ಕೊಡ್ತೀ? ಹೀಂಗ್ ಕೊಟ್ಟರ ಆಗಿ ಹೋತ್ಯ, ಒಂದರಾಗ ನಾಲ್ಕು ಚೂರು ಮಾಡಿ ಒಂದೊಂದು ಚೂರು ಇಡು ಅವರ ಕೈಯಾಗ. ಇಲ್ಲಿ ತಾ ಉಂಡಿ. ನಾನs ಕೊಡ್ತೀನಿ.

[ ಹೆಂಡತಿಯ ಕೈಯಿಂದ ಉಂಡಿ ಕಸಿದುಕೊಂಡು ಅದರಲ್ಲೆ ನಾಲ್ಕು ಚೂರು ಮಾಡಿ ಒಂದು ಚೂರು ಮಾಧವನಿಗೆ ಒಂದು ಚೂರು ಶಾರದೆಗ ಕೊಟ್ಟು]

ಇನ್ನ ನೀವು ಹೋಗರಿ. ಅರವಿಂದ ಶಾಲಿನಿ ಈಗ ಬರೋ ಹಾಂಗಿಲ್ಲ.

**ಮಾಧ್ಯಾ** :— ನಾವೆಲ್ಲಾರೂ—ಗೊಂಬೀ ಮದಿವಿಮಾಡಿ ಆಡ್ತೀವಿ.

**ಸತ್ಯ** :— ಮತ್ತ ಮಾಹುಡುಗರ ಉಂಡಿಗೆ ಗಂಟು ಬೀಳ್ಳಿಕ್ಕೆ! ಈಗ ಬ್ಯಾಡ.

ಸಂಜೀವಮುಂದ ಆದ್ರಿ. ಈಗ ಅರವಿಂದ—ಶಾಲೂ ಪ್ಯಾಟೆಗೆ ಬರ್ತಾರ. ಅವರಿಗೆ ಅಂಗೀ— ಫ್ರಾಕು ತರಬೇಕು. ನೀವು ಹೋಗರಿ.

[ ಎರಡೂ ಹುಡುಗರು ‹ ಅಪ್ಪಾ, ಪ್ಯಾಟ್ಯಾಗ ಹೋಗೋಣs' ಚಪ್ಲಿ ಕೊಡಸೊ ಫ್ರಾಕ್ ಕೊಡಸೊ ' ಎಂದು ಕುಣಿದಾಡಹತ್ತುತ್ತವೆ.]

**ಸಾವಿ** :— ಏನಾದರೂ ಹೊಸಹೊಸ ಬ್ಯಾಟಾ ಮಾಡ್ತೀರಿ ನೋಡ್ರಿ. ಇನ್ನ ಅವು ಪ್ಯಾಟಿಗೆ ಹೋಗೋಣಂತs ಕೂಡ್ತಾವ ನೋಡಿ. ಕರ ಕೊಂಡು ಹೋಗ್ರಿ; ಒಂದನ್ನ ತಪ್ಪಸಲಿಕ್ಕೆ ಹೋಗಿ ಇನ್ನೊಂದು ಕೊಳ್ಳಿಗೆ ಹಾಕ್ಕೊಳ್ರಿ.

**ಸತ್ಯ** :— ಏ, ನೀವು ಹೋಗ್ತೀರಿಲ್ಲೊ ? (ಎಂದು ಕಣ್ಣು ಕೆಂಪಗೆ ಮಾಡಿ ಮಾದ್ಯಾನ ರಟ್ಟೆಹಿಡಿದು, ತಲೆಗೆ ಒಂದೇಟು ಫಟಾ ಎಂದು ಕೊಡುತ್ತಾನೆ. ಮಾಧವ ಅಳುವೋರೆ ಮಾಡುತ್ತಾನೆ—ಶಾರಿಗೆ 'ಹೋಗs ಹುಚ್ಚುಮುಂಡೆ' ಎಂದು ಗಲ್ಲ ಹಿಡಿದು ಚಿವುಟುತ್ತಾನೆ. ಅದು ನ್ಗಂಯ್ ಎಂದು ಅಳುತ್ತಾ ಹೋಗುತ್ತದೆ. ಮಾದ್ಯಾನೂ ಅವಳ ಹಿಂದೆ ಹೋಗುತ್ತಾನೆ. ಅರವಿಂದ— ಶಾಲಿನಿ ಮೂಲೆಯಲ್ಲಿ ಕುಳಿತು ಉಂಡಿ ತಿನ್ನಹತ್ತುತ್ತವೆ]

**ಸಾವಿ** :— ಏನು ಹಿಂಗ ಪಾಪ ಆ ಹುಡುಗರಿಗೆ ಹೊಡದರ? ಮಕ್ಕಳಂದರ ತಿಂಬೊ ಆಶಿ ಇರೋದs !

**ಸತ್ಯ** :— ಅವಕ್ಕಂತೂ ತಿಳಿಯೋದುಲ್ಲ— ಹಡೆದವರಿಗೂ ತಿಳೀಬಾರದೇನು? ಈಗಿನಿಂದಲೇ ಅವಕ್ಕ ರೀತಿ ಕಲಿಸಿದರ ಕಲೀತಾವ, ಮೊದಲು ಹಿರೇರಿಗೇ ರೀತಿ ಇರೋಹಾಂಗಿಲ್ಲ. ಇನ್ನು ಮಕ್ಕಳಿಗೇನು ಕಲಸ್ತಾರ ಮಣ್ಣು ! ಪುಗಸೆಟ್ಟಿ ಸಿಕ್ಕಷ್ಟು ಸಿಗಲಿ—ಮನ್ಯಾಗ ಅಷ್ಟs ಖರ್ಚು ಉಳೀತು. ಈ ಮಗ ರಂಗಪ್ಪ–ದೊಡ್ಡ ದೊಡ್ಡ ಮಾತು ಹೇಳ್ತಾನ– ಖಾದಿ ಅಂತಾನ—ಗಾಂಧಿ ಅಂತಾನ. ಮನೀಮ್ಯಾಲ ಬಾವುಟ ನಿಲ್ಲಿಸ್ಯಾನ....

**ಸಾವಿ** :— ಅದು ದೇಶಭಕ್ತಿಯ ಲಕ್ಷಣ!

**ಸತ್ಯ** :— ಅಲ್ಲ, ತನ್ನ ನಾಚಿಗ್ಗೇಡಿತನದ ಹೆಗ್ಗುರುತು! ಇವರ ಮಕ್ಕಳು ಬಂದು ನಮ್ಮ ಮನ್ಯಾಗ ತಿಂದು ಹೋಗೋದಲ್ಲದs ದಿನಕ್ಕ ಹತ್ತು ಸಾರೆ ಕಡ ಕೇಳ್ಳಿಕ್ಕೆ ಬರ್ತಾಳ ಅವನ ಹೆಂಡತಿ. ಕಡ ಅಂತ ಒಯ್ದದ್ದು ಮುಟ್ಟಸೊ ಹಾಂಗs ಇಲ್ಲ. ಒಂದು ವ್ಯಾಳ್ಯಾ ಕೊಟ್ಟರೂ, ಕೆಟ್ಟದ್ದೊ

ಕೊಳತದ್ದೊ ತಂದು ಕೊಡೋದು—ನೆರೆಹೊರೆ ಇಲ್ಲದ ಮನ್ಯಾಗ ಇರಬೇಕು ಅಂದರ ಬಂಗಲೆ ಹಿಡೀಬೇಕು. ಅಷ್ಟು ಯೋಗ್ಯತಾ ನಮ್ಮಲ್ಲಿಲ್ಲ.

ಸಾವಿ: — ಒಬ್ಬರಿಗೊಬ್ಬರ ನೆರವು ಬೇಕs ಬೇಕು. ಕಡಿಮೆ ಬಿದ್ದಾಗ ನನಗೂ ಎಷ್ಟೋಸಾರೆ ಹೋಗಬೇಕಾಗ್ತದ. ಯಾವಾಗ ಹೋದರೂ ಪಾಪ, ಆ ಹೆಂಗಸು ಇಲ್ಲಂಬೋದುಲ್ಲ. ಇದ್ದರ ಕೊಟ್ಟs ಕೊಡ್ತಾಳ.

ಸತ್ಯ :— ಆದರೆ ಇರೋದs ಇಲ್ಲಲ್ಲ! ಮೊದಲು ಮನೀಗೇನೂ ತರೋ ಹಾಂಗಿಲ್ಲ. ಆದಿರಲಿ. ಇವತ್ತು ಆದಿತ್ಯವಾರ ಅಡಿಗಿ ತಡ ಕಾಣಸ್ತದ ಹೊಟ್ಟೆ ಹಸ್ತsದ. ಒಂದಿಷ್ಟು ಉಪ್ಪಿಟ್ಟಾದರೂ ಮಾಡs!

ಸಾವಿ :— ಉಪ್ಪಿಟ್ಟಿಗೆ ರವಾ ಎಲ್ಲಿದs? ರವಾ ತೊಗೊಂಡು ಬರ್ರಿ- ಮಾಡಿ ಹಾಕ್ತೀನಿ!

ಸತ್ಯ :— ಇನ್ನ ಅದಕ್ಕಾಗಿ ಪ್ಯಾಟಿಗೆ ಹೋಗಬೇಕೇನೊ! ಪ್ಯಾಟಿಗೇ ಹೋಗೋದಾದರ ನಿನ್ನ ಉಪ್ಪಿಟ್ಟೆದಕ್ಕ ? ಅಲ್ಲೇ ಚಹಾದ ಅಂಗಡ್ಯಾಗ, ಉಪ್ಪಿಟ್ಟು ಸಿಗ್ತsದ, ಹೊಡೆದು ಬಂದರಾತ್ಯು.

ಸಾವಿ :— ಅಷ್ಟು ಮಾಡಿದರಾತ್ಯು ಉಪ್ಪಿಟ್ಟು ಬೇಕಾದರ.

ಸತ್ಯ :— ಆದರ ಪ್ಯಾಟಿಗೆ ಹೋಗೋದು ಬ್ಯಾಸರಂತಲ್ಲs ಈಗ ನಿನಗ ಮಾಡು ಅಂತ ಅಂಬೋದು.

ಸಾವಿ :— ಹೌದು ರವಾ ಇದ್ದರ ಮಾಡ್ತಿದ್ದೆ-ನಾ ಎಲ್ಲಿ ಇಲ್ಲ ಅಂತೀನಿ.

ಸತ್ಯ :— ಇನ್ನೇನಾರ ಮಾಡು.

ಸಾವಿ :— ಇನ್ನೇನು ಮಾಡೋದು ? ಪುರಿ ಮಾಡಬೇಕಂದರ ಗೋದಿಹಿಟ್ಟು ತೀರೇದ. ಅವಲಕ್ಕಿ ಹಚ್ಚಬೇಕಂದರ ನಿಮಗ ಸೇರೂದುಲ್ಲ.

ಸತ್ಯ :— ಬ್ಯಾಡ, ಮುಂಜಾನ್ಹೊತ್ತು ಹೊಟ್ಟೆಗೆ ಸ್ವಲ್ಪ ಮೆತ್ತಗಿದ್ದರ ಒಳ್ಳೇದು.

ಸಾವಿ: — ಮತ್ತೇನು ಮಾಡಲಿ ಹಾಂಗಾರ ? ನೀವು ರವಾ ತರೋಹಾಂಗಿಲ್ಲ ನಾ ನೆರಮನಿಯವರ್ನ ಕೇಳೋ ಹಾಂಗಿಲ್ಲ-ಇದ್ದರ ಆ ಪ್ರಾಣಿ ಕೊಟ್ಟs ಕೊಡ್ತಾಳ; ಎಂದೂ ಇಲ್ಲಂದಿಲ್ಲ. ನೀವು ಅವರಿಗೆ ಬೈತೀರಿ ಅಂತ, ಇಲ್ಲದಿದ್ದರ ನಾ ಈಗ ಹೋಗಿ ಕೇಳಿ ಬರ್ತಿದ್ದೆ.

ಸತ್ಯ:— ಕೇಳು, ಕೇಳು ಹೋಗಲಿ, ಮತ್ತೇನು ಮಾಡೋದು? ಅವರಿಗೆ ನಾಚಿಗಿಲ್ಲ ಅಂತ ನಾವು ಬೈದಿವಿ! ಅವರು ನಿಶಾನಿ ಹಚ್ಯಾರ, ನಾವು ಹಚ್ಚಿಲ್ಲ—ಇಷ್ಟs ಅಂತರ!

[ಸಾವಿತ್ರಿಬಾಯಿ ಹೋಗುತ್ತಾಳೆ—ಸತ್ಯವಂತರಾಯ ತನ್ನ ಮಕ್ಕಳ ಹತ್ತಿರ ಬಂದು ಒಂದು ಬೀಡಿ ಹೊತ್ತಿಸಿ ಸೇದುತ್ತ]

ಸತ್ಯ:— ಅರವಿಂದಾ, ಇನ್‌ಮ್ಯಾಲ ಆ ಮಾದ್ಯಾ—ಶಾರಿ ಬಂದರ ಅವರಿಗೆ ತೋರಸ್ದ ತಿನ್ರಿ. ಈ ಉಂಡ್ಯಾಗಿಂದೇನಾದರೂ ಕೊಟ್ಟೇನು ಅವರಿಗೆ?

ಅರ:· ಇಲ್ಲ. ಕೊಡಲಿಲ್ಲಪ್ಪಾ.

ಸತ್ಯ:— ಚಲೋ ಆತು ನಾಳ ನಿಮಗ ಬಿಸ್ಕೀಟು ಕೊಡ್ತೀನಿ, ಅವರಿಗೆ ತೋರಸಬಾರ್ದು ಮತ್ತ?

[ಎರಡೂ ಹುಡುಗರು ಗೋಣು ಹಾಕುತ್ತವೆ. ಸಾವಿತ್ರಿಬಾಯಿ ಥಾಲಿಯಲ್ಲಿ ರವಾ ಹಿಡಿದುಕೊಂಡು ಬರುತ್ತಾಳೆ]

ಸತ್ಯ:— ಏನು ತಂದೇನು? ಭಲೆ, ನಮ್ಮ ಅದೃಷ್ಟ ನೆಟ್ಟಗದ? ನೀ ಬರಿ ಗೈಲೆ ಬರ್ತೀ ಅಂತ ಅಂದುಕೊಂಡಿದ್ದೆ.

ಸಾವಿ:— ಅದಿರಲಿ. ನಾ ಯಾಕ ತಂದೆ ಅಂತ ಈಗ ಅನಸ್ತsದ!

ಸತ್ಯ:— ಯಾಕ? ಏನಾತ್ಯು?

ಸಾವಿ:— ಆ ಮಾದ್ಯಾ—ಶಾರಿ ನೀವು ಹೊಡೆದದ್ದು ಅತ್ತತ್ತು ತಾಯಿ ಮುಂದ ಹೇಳ್ತಿದ್ದವು.

ಸತ್ಯ:— ಮುಂದ?

ಸಾವಿ:— ಮುಂದೇನು? ಅವರು ಪಾಪ, ನನ್ನ ಮುಂದ ಯಾವ ಮಾತೂ ಆಡಲಿಲ್ಲ. ರವಾ ಕೇಳಿದೆ ಕೊಟ್ಟರು.

ಸತ್ಯ:— ಏನು ಕೆಟ್ಟವ ಹುಡುಗರವು? ಇನ್ನೊಮ್ಮೆ ನಮ್ಮ ಮನ್ಯಾಗ ಕಾಲೊಂದs ಇಡಲಿ ಮುಸಡಿ ಬಾಯೊಹಾಂಗ ಹಾಕ್ತೀನಿ.

[ಹೀಗನ್ನುತ್ತ ಪಡಸಾಲೆಗೆ ಬರುತ್ತಾನೆ—ರಂಗಪ್ಪ ಅದೇ ಹೊತ್ತಿಗೆ ಹೊರಗಿನಿಂದ ಬರುತ್ತಾರೆ. ಅವರನ್ನು ನೋಡಿ]

ಸತ್ಯ:— ಏನು ರಂಗಣ್ಣಾ, ಪ್ಯಾಟೆಗೆ ಹೋಗಿದ್ರೇನು? ಬರ್ರಿಲ್ಲಾ?

**ರಂಗ :**— (ಒಳಗೆ ಬಂದು ಖುರ್ಚಿಯ ಮೇಲೆ ಕೂತು) ಪ್ಯಾಟಿಗಲ್ಲ—ಸಂಘಕ್ಕ ಹೋಗಿದ್ದೆ. ಒಂದು ಪುಸ್ತಕ ಬೇಕಾಗಿತ್ತು.

**ಸತ್ಯ :**— ಮತ್ತೇನು ಸುದ್ದಿ ? ಯುದ್ಧ ಏನಂತ್ಯದ ? ಪೇಪರ ಸುದ್ದಿ ಇರಲಿ, ರೇಡಿಯೊ ಗೀಡಿಯೊ ಕೇಳಿದ್ರ ಹೇಳ್ರಿ. (ಒಳಗೆ ಹೆಂಡತಿಗೆ ಕೇಳಿಸುವ ಹಾಗೆ) ಏನs ಎರಡು ಕಪ್ ಕಾಫಿ, ಅಷ್ಟು ಉಪ್ಪಿಟ್ಟು ಮಾಡು.

**ರಂಗ :**— ಛೇ, ಈಗ ಯಾಕ್ರಿ ಕಾಫಿ—ಉಪ್ಪಿಟ್ಟು ? ಬ್ಯಾಡ. ಇಷ್ಟಾಗಿ ನನಗ ಮುಂಜಾನೆ ತಿನ್ನುವ ಅಭ್ಯಾಸ ಇಲ್ಲ.

**ಸತ್ಯ :**— ಇರಲಿ, ಇರಲಿ, ನಾವು ಈ ಮನಿಗೆ ಬಂದು ಒಂದು ವರ್ಷವಾದರೂ ನಮ್ಮಲ್ಲಿ ಎಂದೂ ನೀವು ಚಹಾ ಕಾಫಿ ತೊಗೊಂಡಿಲ್ಲ. ನಿಮ್ಮನ್ನ ಕರೀಬೇಕು ಕರೀಬೇಕು ಅಂತ ಅಂದs ಅಂತೀನಿ. ನಮ್ಮ ಈ ಕೆಲಸ ದಾಗ ಪುರಸತ್ತs ಆಗೋದುಲ್ಲ. ಇವತ್ತು ಆದಿತ್ಯವಾರ. ಅನಾಯಾಸ ನೀವೂ ಬಂದಿರಿ. ಹಾಂಗ ನಿಮ್ಮ ಮನೆಯವರೂ ನಿಮ್ಮ ಹುಡುಗರೂ ಬಂದs ಬರ್ತಾರ ನಮ್ಮಲ್ಲಿ ! ನಿಮ್ಮ ಹುಡುಗರಂತೂ ಸದಾ ನಮ್ಮಲ್ಲೇ ಇರ್ತಾವ! ಬಹಳ ಒಳ್ಳೇ ಹುಡುಗರು, ಸಮಾಧಾನಿ; ಕಾಡೋವಲ್ಲ; ಬೇಡೋವಲ್ಲ ! ಏನಾದರೂ ತಿನ್ನಲಿಕ್ಕೆ ಕೊಟ್ಟರೂ ತೊಗೊಂಬೋ ದುಲ್ಲ! ನಾವs ಜುಲುಮಿಲೆ ಕೊಡಬೇಕು. ಒಂದು ಗಳಿಗೆ ಮಾಧವಾ— ಶಾರದಾ ಇರದಿದ್ದರ ನಮ್ಮ ಹುಡುಗರಿಗೆ ಸಮಾಧಾನ ಅನಸೋದುಲ್ಲ. ಆಗಲೇ ಹೋಗಿ ಕರಕೊಂಡು ಬರ್ತಾವ.

[ ತಂದೆಯ ದನಿ ಕೇಳಿ ಮಾಧವಾ ಶಾರದಾ ಅಳುತ್ತಾ ಬರುತ್ತಾರೆ. ರಂಗಪ್ಪ ಎದ್ದು ಹೋಗಿ ಅವರಿಬ್ಬರನ್ನೂ ಕೈಹಿಡಿದು ಕರತಂದು ಕುರ್ಚಿಯ ಮೇಲೆ ಕೂಡುತ್ತಾನೆ.]

**ರಂಗ :**— ಏನಾಯಿತೊ ಮಾಧವಾ ? ಒಂಬಮ್ಮಾ, ಏನಾತ್ಯ ಅಕ್ಕಾ ? ಆಕಿ ಹೊಡದ್ಲೇನು ?

**ಮಾ :**— ಅವ್ವ ಹೊಡೀಲಿಲ್ಲಪ್ಪಾ ! ಇವರು (ಸತ್ಯವಂತರಾಯನ ಕಡೆಗೆ ಬೊಟ್ಟು ಮಾಡಿ ತೋರಿಸುತ್ತ) ಈ ಕಾಕಾ ಹೊಡದರು !

**ಶಾರದಾ :**— ಇವಲು ನಂಗ ಚೂಟಿದ್ಲು !

[ ಸತ್ಯವಂತರಾಯ ಚಟ್ಟನೆ ಎದ್ದು ಒಳಗೆ ಹೋಗುತ್ತಾನೆ ರಂಗಪ್ಪ ಮಕ್ಕಳನ್ನು ಸಮಾಧಾನಪಡಿಸುತ್ತಾನೆ. ಕೆಲ ನಿಮಿಷ ಸ್ತಬ್ಧತೆ—ಸತ್ಯವಂತರಾಯ ಒಳಗೇ ಉಳಿದು ಬಿಟ್ಟದ್ದನ್ನು ನೋಡಿ ]

ರಂಗ :— ಸತ್ಯವಂತರಾಯರೆ, ಸತ್ಯವಂತರಾಯರೆ, ಮಕ್ಕಳ ಮಾತು ಕಟಿಗೊಂಡು ಏನು ಮಾಡ್ತೀರಿ ಬರ್ರಿ!

[ ಸತ್ಯವಂತರಾಯ ಬಾಗಿಲವರೆಗೆ ನಿಂತು ಗೋಣು ಹೀಗೆ ಹೊರಚಾಚಿ ನಾಲಿಗೆ ಕಡಿದುಕೊಳ್ಳುತ್ತಾನೆ.]

ತೆರೆ ಬೀಳುತ್ತದೆ

ಬೇಂದ್ರೆ ಲಕ್ಷ್ಮಣರಾಯರು
ಧಾರವಾಡ

# ವಧು ಪರೀಕ್ಷೆ

**ಪಾತ್ರಗಳು**

೧. ರಾಮು (ವರ)
೨. ವರನ ತಂದೆ
೩. ವರನ ಅಕ್ಕ
೪. ರತ್ನ (ಕನ್ಯೆ)
೫. ಶಾಮರಾಯರು (ರತ್ನಳ ತಂದೆ)
೬. ವರನ ಭಾವ
೭. ಪುರೋಹಿತರು

[ ಮದುವೆಯ ಮನೆ. ಒಂದು ವಿಶಾಲವಾದ ಕೊಠಡಿ. ರಂಗದ ಬಲಕ್ಕೆ ಆ ಕೋಣೆಯ ಬಾಗಿಲು ಕಾಣುತ್ತದೆ. ಎದುರಿಗೆ ಒಂದು ಸೋಫ. ಬಲಗಡೆ ೨-೩ ಕುರ್ಚಿಗಳು. ವರಪೂಜೆಗೆ ಸಿದ್ಧನಾಗಿರುವ ರಾಮು ಬಿಳಿಬಾಳುವ ಪಂಚೆಯುಟ್ಟು, ಶಲ್ಯ, ಷರಟನ್ನು ಹಾಕಿಕೊಂಡು ಕುತೂಹಲದ ಮುಖಮುದ್ರೆಯಿಂದ ಬೆನ್ನ ಕೆಳಗೆ ಕೈಕಟ್ಟಿಕೊಂಡು ನೆಪೋಲಿಯನ್ನನಂತೆ, ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ, ಒಂದೊಂದು ಸಲ ನಿಧಾನವಾಗಿ ಒಂದೊಂದು, ಸಲ ಅವಸರವಸರವಾಗಿ ಓಡಾಡುತ್ತಿದ್ದಾನೆ. ಅವನಿಗೆ ಸುಮಾರು ೨೨-೨೩ರ ವಯಸ್ಸು. ಅಂಥಾ ಸುಂದರನಲ್ಲದಿದ್ದರೂ ಕುರೂಪಿಯಲ್ಲ. ತೆರೆ ಮೇಲೆದ್ದ ಒಂದೆರಡು ಕ್ಷಣಗಳು ಹಾಗೇ ಓಡಾಡುತ್ತಿರುತ್ತಾನೆ. ಅಷ್ಟರಲ್ಲಿ ಒಳಗಿಂದ "ಭಾವಾ ಬಂದರು...... ಭಾವಾ ಬಂದರು." ಎಂಬ ಕೂಗು ಕೇಳಿಸುವುದು. ರಾಮು ಆತುರದಿಂದ ಬಾಗಿಲ ಬಳಿ ಹೋಗಿ "ಭಾವಾ......ಭಾವಾ" ಎಂದು ಕೂಗುವನು. ಉತ್ತರ ಬರುವುದಿಲ್ಲ. ಒಳಗಡೆ ಮದುವೆಗಾಗಿ ಬಂದ ಬಂಧುಬಳಗದವರ ಗಲಾಟೆ ಜಾಸ್ತಿಯಾಗುವುದು. ರಾಮು ಕ್ಷಣಹೊತ್ತು ಅತ್ತಿಂದಿತ್ತ ತಿರುಗಿ ಪುನಃ "ಭಾವಾ...... ಭಾವಾ" ಎಂದು ಕೂಗುವನು. ಒಳಗಿಂದ 'ಓ! ಬಂದೆ' ಎಂಬ ಉತ್ತರ ಬರುವುದು: ರಾಮು ಪುನಃ ತಿರುಗಾಡಲಾರಂಭಿಸುವನು. ಸ್ವಲ್ಪಹೊತ್ತಿನಲ್ಲಿ ಅವನ ಭಾವ ಪ್ರವೇಶಿಸುವನು. ಅವನಿಗೆ ೩೦ರ ವಯಸ್ಸು. ಅವನು ಯಾವಾಗಲೂ ಹಸನ್ಮುಖಿ ಮತ್ತು ಸರಸಿ. ]

**ಭಾವ :—** ಇದೇನೋ ರಾಮು ಶತಪಥ ?

**ರಾಮು :—** ಏನೂ ಇಲ್ಲ. ಕೂತುಕೋ ಭಾವ. ಇದೇಕಿಷ್ಟು ತಡ ? ನನ್ನ ಮದುವೇಗಾದರೂ ಒಂದೇ ದಿನ ಮುಂಚಿತವಾಗಿ ಬರಬಾರದಿತ್ತೆ ?

**ಭಾವ** :— ಏನೋ ತಾಬೇದಾರಿ ಕೆಟ್ಟದ್ದು. ರಜಾ ಆಗಲಿಲ್ಲ. (ಕುರ್ಚಿಯ ಮೇಲೆ ಕುಳಿತು) ಹೋಗಲಿ ಬಿಡು ಬಂದದ್ದಾಯಿತಲ್ಲಾ, ಈಗಲಾದರೂ.

**ರಾಮು** :— ಅದು ಸರಿ ಭಾವಾ!

**ಭಾವ** :— ಏಕೆ? ಏನೋ ಯೋಚನೆ ಮಾಡ್ತಾ ಇರೋ ಹಾಗಿದೆಯಲ್ಲೋ?

**ರಾಮು** :— ಯೋಚನೇನೆ ಭಾವ.

**ಭಾವ** :— ಆ! ಏನು ಯೋಚನೇನೋ. ಅಲ್ಲೋ, ನೀವಿಲ್ಲಿಗೆ ಬಂದಾಗಿಂದ ಬೀಗರು ನಿಮಗೆ ಸರಿಯಾಗಿ ಗೌರವ ಕೊಟ್ಟು ಉಪಚಾರಗಿಪಚಾರ ಸರಿಯಾಗಿ ಮಾಡಿದರೋ ಇಲ್ವೋ?

**ರಾಮು** :— ಪಾಪ! ಪಾಪ! ಮಾಡಿದರು ಅನ್ನು.

**ಭಾವ** :— ಸರಿ. ವರದಕ್ಷಿಣೆ ವಿಚಾರ. ನಿನ್ನಿಷ್ಟದ ಪ್ರಕಾರ ಗೊತ್ತಾಗಿದೆಯೋ ಇಲ್ವೋ?

**ರಾಮು** :— ಗೊತ್ತಾಗಿದೆ ಭಾವ.

**ಭಾವ** :— ಎದುರುಗೊಳ್ಳೋ ಸಂಭ್ರಮ ಇನ್ನೇನು ಇನ್ನೊಂದು ಘಂಟೆ ಹೊತ್ತಿನಲ್ಲಿ ಜರುಗಬಹುದಲ್ಲವೆ?

**ರಾಮು** :— ಹೂ.

**ಭಾವ** :— ಸರಿ. ವರದಕ್ಷಿಣೆ ಆಗ ಕೊಡುತ್ತಾರಂತೋ ಇಲ್ವೋ?

**ರಾಮು** :— ಕೊಡ್ತಾರೆ. ಕೊಡ್ತಾರೆ, ಬಿಡು. ಭಾವ ಅದರಲ್ಲಿ ತಕರಾರು ಏನೂ ಇಲ್ಲ.

**ಭಾವ** :— ಸರಿ. ಇನ್ನು ಹುಡುಗಿ ವಿಷಯ. ಲಕ್ಷಣವಾಗಿ ನಿನಗೊಪ್ಪಿಗೆ ಆಗೋ ಹಾಗೆ ಇದ್ದಾಳೋ ಇಲ್ವೋ?

**ರಾಮು** :— ನೋಡು ಭಾವ! ಅಲ್ಲೇ ಬಂದಿರೋದು ಸ್ವಲ್ಪ ಅನುಮಾನ.

**ಭಾವ** :— (ಆಶ್ಚರ್ಯದಿಂದ) ಆ! ಏನು! ಅನುಮಾನ! ಹುಡುಗಿ ಲಕ್ಷಣವಾಗಿಲ್ಲದಿದ್ದರೆ ನೀನೇಕೆ ಒಪ್ಪಿಕೊಂಡೆಯೊ ಮೊದಲು?

**ರಾಮು** :— ಹುಡುಗಿ ಲಕ್ಷಣವಾಗಿಲ್ಲ ಅಂತ ಹೇಳಿದೆನೆ ಭಾವ ನಾನು?

**ಭಾವ** :— ಇದೇನೋ ಮತ್ತೆ. ಆಗ ಹಾಗಂದಿ, ಈಗ ಹೀಗಂತಿ.

**ರಾಮು** :— ಈ ಮದುವೆ ಹೇಗೆ ಗೊತ್ತಾಯಿತು ತಿಳಿದಿದೆಯೆ ಭಾವ ನಿಂಗೆ?

**ಭಾವ** :— ಹೇಗೋ ಯಾರಿಗ್ಗೊತ್ತು, ಲಗ್ನಪತ್ರಿಕೆ ಕಳಿಸಿದಿರಿ. ಬಂದ್ವಿ ಅಷ್ಟೆ.

**ರಾಮು** :— ನೋಡು ಭಾವ. ನಾನು ಬಿ. ಎ. ಪ್ಯಾಸುಮಾಡಿ ಡಿಗ್ರಿ ತೊಗೊಳ್ಳೋದಕ್ಕೆಂತ ಮೈಸೂರಿಗೆ ಹೋಗಿರಲಿಲ್ಲವೆ!

**ಭಾವ** :— ಹೊ! ಅಲ್ಲೇ ಇದ್ದು ಬಿಟ್ಟೆಯಲ್ಲಾ ಎಷ್ಟೋ ದಿವಸ.

**ರಾಮು** :— ಅದು ಸರಿ ಅನ್ನು. ಆವಾಗ ಈ ಹುಡಿಗಿ ತಂದೆ ವರ ಹುಡಿಕಿ ಕೊಂಡು ನಮ್ಮನೆಗೆ ಬಂದಿದ್ದರಂತೆ.

**ಭಾವ** :— ಹೂ.

**ರಾಮು** :— ಸರಿ, ಮಾತುಕತೆ ಆಯಿತು. ಜಾತಕಗಳು ಕೂಡಿಬಂತು. ಕೊಡೋದು ಬಿಡೋದು ಕೂಡ ಗೊತ್ತು ಮಾಡಿಕೊಂಡರು. ಒಂದೆಂಟು ದಿನ ಬಿಟ್ಟು ಲಗ್ನ ಕೂಡ ಇಟ್ಟುಬಿಟ್ಟರು, ಅನ್ನು.

**ಭಾವ** :— ಅದಿರಲಿ. ಹುಡುಗೀನ ತೋರಿಸಲಿಲ್ಲವೇನಯ್ಯ?

**ರಾಮು** :— ಇಲ್ಲಿ ಕೇಳು. "ಹುಡುಗೀನ್ನ ಮೈಸೂರಿಗೆ ಕರೆದುಕೊಂಡು ಹೋಗೋದಕ್ಕಾಗೋದಿಲ್ಲ. ಬೇಕಾದರೆ ಅವರಿಗೆ ಒಂದು ಫೋಟೋ ಕಳಿಸ್ತೇವೆ" ಅದರಂತೆ ಅಪ್ಪನಿಗೆ ತೋರಿಸಿದರು. ಅವನು ಒಪ್ಪಿದ.

**ಭಾವ** :— (ನಡುವೆಯೆ ಬಾಯಿ ಹಾಕಿ) ಅಲ್ವೊ ನೀನು?

**ರಾಮು** :— ಇಲ್ಲಿ ಕೇಳು. ಅಪ್ಪ ಇದ್ದುಕೊಂಡು, 'ಹುಡುಗನಿಗೆ ಫೋಟೋ ಕಳಿಸಿಕೊಡಿ. ಅವನೊಪ್ಪಿದರೆ ನನ್ನದೇನೂ ಅಡ್ಡಿಯಿಲ್ಲ.' ಅಂದು ಬಿಟ್ಟ.

**ಭಾವ** :— ಓಹೋ! ನಮ್ಮ ಅಜ್ಜಿ ಕಥೇಲಿ ಬರೋ ರಾಜಕುಮಾರ ಮದುವೆ ಆದ ಹಾಗೆ ಅನ್ನು ನಿನ್ನ ಮದುವೆ (ನಗುವನು)

**ರಾಮು** :— ನಗಬೇಡ ಭಾವ. ನನಗೂ ಫೋಟೋ ಬಂತು. ಜೊತೇಲಿ ಒಪ್ಪಿದ್ದಕ್ಕೆ ಟೆಲಿಗ್ರಾಂ ಕೊಡಬೇಕು ಅಂತ ಬರೆದಿದ್ದರು.

**ಭಾವ** :— ಸರಿ ಸರಿ ಟೆಲಿಗ್ರಾಂ ಕೊಟ್ಟೆ. ಮದುವೆಗೆ ಬಂದಿ ಅನ್ನು.

**ರಾಮು** :— ಹೂ.

**ಭಾವ** :— ಸರಿ ಮತ್ತೆ ಒಪ್ಪಿದ್ದೀಯಲ್ಲಾ ಇನ್ಯಾಕೆ ಯೋಚನೆ?

**ರಾಮು** :— ಆದರೆ ಹುಡಿಗಿ ಹೇಗಿದ್ದಾಳೋ?

**ಭಾವ** :— ಇದೇನೊ ರಾಮು ಫೋಟೋ ನೋಡಿದಿ. ಒಪ್ಪಿಗೆ ಕೊಟ್ಟೆ.

ಮದುವೇಗೆ ಅಂತ ಬಂಧುಬಳಗಗಳನ್ನು ಕರಕೊಂಡು ನೂರಾರು ಮೈಲಿ ದೂರ ಬಂದಿದ್ದಿ. ವರಪೂಜೆಗೆ ಹೊರಟು ನಿಂತಿದ್ದಿ. ಈಗೇನು ಮಾತೋ ಇದು ?

**ರಾಮು** :— (ಪ್ರಾರ್ಥಿಸುವಂತೆ) ಅಲ್ಲಾ ಭಾವಾ! ನೀನೂ ಎಲ್ಲರ ಹಾಗೇ ಮಾತನಾಡಿ ಬಿಟ್ರೆ ನಾನು ನನ್ನ ಕಷ್ಟಾನ್ನ ಇನ್ಯಾರ ಹತ್ತಿರ ಹೇಳ ಕೊಳ್ಳಬೇಕು ಹೇಳು. ?

**ಭಾವ** :— ಅದೇನೋ ನಿನ್ನ ಕಷ್ಟ ?

**ರಾಮು** :— ನೋಡು ಭಾವಾ. ಆಗೇನೋ ಫೋಟೋ ನೋಡಿದೆ ಆ ಚಿತ್ರ ಹೇಗಿದೆ ಅಂತಿ ? ಬಹು ಸುಂದರವಾಗಿದೆ. ಆ ಚಿತ್ರದಂಥ ಹುಡಿಗೀನ್ನ ನಾನೆಲ್ಲೂ ನೋಡಿಲ್ಲ.

**ಭಾವ** :— ಇನ್ನೇನೋ ಮತ್ತೆ ?

**ರಾಮು** :— ಆದರೆ ನನಗೊಂದು ಸಂಶಯ ನೋಡು ಭಾವ. ಫೋಟೋದಲ್ಲಿ ಆ ಫೋಟೋ ತೆಗೆಯುವವನು ಮನಸ್ಸು ಮಾಡಿದರೆ ಸುರೂಪೀನ ಕುರೂಪಿ ಮಾಡಬಹುದು, ಕುರೂಪೀನ ಸುರೂಪಿ ಮಾಡಬಹುದು. ಹೌದೋ ಅಲ್ವೊ ?

**ಭಾವ** :— ಹೌದು! ಮಾಡಬಹುದು.

**ರಾಮು** :— ನನಗೆ ಕಳಿಸಿದ ಫೋಟೋ ಹುಡಿಗಿಯ ಸರಿಯಾದ ಚಿತ್ರ ವಾಗಿದ್ದು ಅದರಲ್ಲಿ ಫೋಟೊ ತೆಗೆಯುವವನ ಕೈವಾಡ ಏನೂ ಇಲ್ಲದೆ ಇದ್ದರೆ ಸರಿ. ಹಾಗಿಲ್ಲದೆ ಹೋದರೆ ಗತಿ ?

**ಭಾವ** :— ಹೌದೋ! ಅದನ್ನ ನೀನು ಅವತ್ತೇ ಏಕೆ ಯೋಚಿಸಲಿಲ್ಲ ಅಂತೇನೆ ?

**ರಾಮು** :— ಆ ಯೋಚನೆ ಹೊಳೆದದ್ದು ಈಗ, ಅರ್ಧಘಂಟೆ ಕೆಳಗೆ, ನೋಡು ಭಾವ ಇದುವರೆಗೆ ಆ ಯೋಚನೇನೇ ಹೊಳೀಲಿಲ್ಲ.

**ಭಾವ** :— ಹೌದು. ಇಷ್ಟೊತ್ತಿನಲ್ಲಿ; ಈ ಸಮಯದಲ್ಲಿ ಏನು ಮಾಡೋ-ದಕ್ಕಾಗುತ್ತೊ ?

**ರಾಮು** :— ನೋಡು ಭಾವ. ಈಗ ನೀನೇ ಸಹಾಯ ಮಾಡಬೇಕು. ನೀನೇ ಮಾಡದಿದ್ದರೆ ಇನ್ಯಾರು ಮಾಡೋದಕ್ಕೆ ಸಾಧ್ಯ.

**ಭಾವ:**—(ಸ್ವಲ್ಪ ಯೋಚಿಸಿ) ಹೂ. ಇರು ನೋಡೋಣ. (ಬಾಗಿಲಬಳಿ ಹೋಗಿ) ಲೇ! ಲೇ! ಇಲ್ಲಿ ಬಾ ಇಲ್ಲಿ. (ಕೆರೆಯೊಳಗಿಂದ 'ಬಂದೆ' ಎಂದು ಉತ್ತರ ಬರುವುದು). ಅಲ್ಲೋ ರಾಮು ಈಗೇನು ಮಾಡ್ತೋಣೋ ಈ ಹೊತ್ತಿನಲ್ಲಿ ........... ..........….

[ರಾಮು ಅಕ್ಕ ಬರುವಳು. ಅವಳಿಗೆ ಸುಮಾರು ೨೫ ರ ವಯಸ್ಸು. ಎಣ್ಣೆಗೆಂಪು ಬಣ್ಣ. ರಾಮುವಿನ ಹಾಗೇ ರೂಪ. ತುಂಬು ಮೈ. ರೇಷ್ಮೆ ಸೀರೆಯುಟ್ಟು ಸಣ್ಣ ಜರತಾರಿಯಂಚಿನ ಕುಪ್ಪಸ ತೊಟ್ಟಿದ್ದಾಳೆ.]

**ಅಕ್ಕ:**— ಏನಂದ್ರಿ?

**ಭಾವ:**— ಅಲ್ಲೇ! ರಾಮು ಮದುವೆ ಹೇಗೆ ಗೊತ್ತಾಯ್ತು ತಿಳೀತೇನೆ?

**ಅಕ್ಕ:**— ಇಷ್ಟೊತ್ತೂ ಅದೇ ಮಾತೇ ಆಡ್ತಾ ಇದ್ವಿ

**ಭಾವ:**— ಅದು ಸರೀ. ಹುಡುಗಿ ವಿಷಯ ಏನಾದರೂ ತಿಳಿದಿದೆಯೇನೇ?

**ಅಕ್ಕ:**— ರಾಮು ಅಂಥ ಇಂಥ ಹುಡುಗಿನ್ನ ಒಪ್ಪುತ್ತಾನೇನಂದ್ರಿ. ಒಳ್ಳೇ ವಿದ್ಯಾವಂತಳು. ಈ ವರ್ಷ ಎಸ್. ಎಸ್. ಎಲ್. ಸೀಗೆ ಕಟ್ತಾಳೆ....

**ಭಾವ:**— (ನಡುವೇ ಬಾಯಿ ಹಾಕಿ) ಚ್. ಚ್. ಅದು ಸರಿನೇ. ಹುಡುಗಿ ರೂಪಾನೇ? ಹೇಗಿದ್ದಾಳೆ?

**ಅಕ್ಕ:**— ಹುಡುಗೇನು ಲಕ್ಷಣವಾದ ಹುಡುಗಿ. ಅಂಥಾ ಹುಡುಗೀನ ಕೈ ಹಿಡಿಯೋಕೆ ಪುಣ್ಯ ಮಾಡಿದ್ದ ರಾಮು ಅಂತ ಅಂತಾರೆ ಎಲ್ಲರೂ.

**ಭಾವ:**— ಎಲ್ಲರೂ ಅಂತಾರೆ ಸರಿಯೇ. ರಾಮು ಅನ್ನಬೇಡವೇನೆ ಹಾಗಂತ?

**ಅಕ್ಕ:**— ಏಕೆ ಏನಾಗಿದೆಯಂತೆ ರಾಮೂಗೆ (ರಾಮೂ ಕಡೆ ತಿರುಗಿ) ಏಕೋ ಏನಾಗಿದೆಯೊ ಹುಡುಗೀಗೆ?

**ಭಾವ:**— ಇಲ್ಲಿ ಕೇಳೆ ಇಲ್ಲಿ. ಅವನನ್ನೇನು ಕೇಳ್ತೀಯೆ. ಅವನು ಹುಡುಗಿನ್ನೇ ನೋಡಲಿಲ್ಲವಂತಲ್ಲೆ?

**ಅಕ್ಕ:**— ನೋಡ್ದೇ ಇದ್ರೇನು ಫೋಟೋ ನೋಡ್ಲಿಲ್ವೇ? ಒಪ್ಪಿಕೊಳ್ಳಿಲ್ವೆ?

**ಭಾವ:**— ಫೋಟೋನ್ನ ಮದುವೆಯಾಗ್ತಾನೇನೆ ಹುಡುಗೀನ್ನಲ್ಲೇನೆ ಮದುವೆಯಾಗೋದು?

**ಅಕ್ಕ:**— ಸಾಕು ಸುಮ್ಮನಿರೀಂದ್ರಿ. ನೀವೇನು ಬಹಳ ಹೆಣ್ಣನ್ನ ನೋಡೇ ಮದುವೆ ಮಾಡ್ಕೊಂಡಿದ್ದು.

ಭಾವ :— ನೋಡದೇ ಇರೋ ಹೊತ್ತಿಗೇ ಮತ್ತೆ ನಿನ್ನಂಥ ರಂಭೆ ನಮಗೆ ಗಂಟು ಬಿದ್ದದ್ದು.

ಅಕ್ಕ :— ಆಹಾ! ರಂಭೆ ಅಲ್ಲಾಂತ ಬಿಟ್ಟರೋದೇನೋ ಕಾಣೆ.

ಭಾವ :-- ಮಾಡಿಕೊಂಡ ಮೇಲೆ ಬಿಡೋಕಾಗುತ್ತೆ? "ಪಾಲಿಗೆ ಬಂದದ್ದು ಪಂಚಾಮೃತ."

ಅಕ್ಕ :— ಸರಿ. ಅವನಿಗೂ ಹಾಗೇ.

ಭಾವ :— ನಮ್ಮದೊಂದು ಕಾಲ ನಡೆದುಹೋಯಿತು ಅನ್ನು. ಆದರೆ ಈಗಿನ ಕಾಲದಲ್ಲಿ ಹಾಗಲ್ಲ, ಗಂಡು ಹೆಣ್ಣಿನ್ನ ನೋಡಬೇಕು, ಒಪ್ಪಬೇಕು.

ಅಕ್ಕ :— ಗಂಡಿನ್ನ ಹೆಣ್ಣು ನೋಡಿ ಒಪ್ಪಬೇಡವೇನೋ?

ರಾಮು :— (ನಗುತ್ತಾ) ಇನ್ನೂ ಆ ಕಾಲ ಬಂದಿಲ್ಲಕ್ಕಾ. ಆ ದಿನ ಬಂದರೆ ಹಾಗೂ ಆಗಬೇಕಾದೀತು.

ಭಾವ :— ಆ ಮಾತು ಅಲ್ಲಿಗೇ ಬಿಡಿ. ಈಗೇನಂತಿ ರಾಮು. ಹುಡುಗಿ ಲಕ್ಷಣವಾಗಿದೇಂತ ಎಲ್ಲರೂ ಹೇಳ್ತಾರೆ.

ರಾಮು :— ಅನ್ನೋದೇನು ಭಾವಾ. ನನ್ನ ಮನಸ್ಸಿಗೇನೋ ಸಂಶಯ ಹುಟ್ಟಿಬಿಟ್ಟದೆ. ಹುಡುಗಿನ್ನ ನೋಡಬೇಕು ಅನಿಸಿದೆ. ನೋಡೋ ವರೆಗೂ ವರಪೂಜೇನೂ ಇಲ್ಲ. ಗಿರಪೂಜೇನೂ ಇಲ್ಲ. ಖಂಡಿತ.

ಅಕ್ಕ :— ಇದೇನೋ ಇದು ಹೀಗೆ ಮಾಡ್ತಿ?

ಭಾವ :— ಅವನು ಹೇಳೋದೇನೋ ಸರೀನೆ. ನಿಜವಾಗಲು ಹೇಳಬೇಕೂಂದ್ರೆ ನನಗೂ ಅವನ ಮಾತು ಒಪ್ಪಿತಾನೇ ಹುಡುಗಿನ್ನ ನೋಡದೇ ಮದುವೆಯಾಗೋದು ಸರಿಯಲ್ಲ. ಆಗಲಿ, ಆದಕ್ಕೆ ಏರ್ಪಾಟು ಮಾಡೋಣ.

ಅಕ್ಕ :— ಇದೇನಂದ್ರೆ ನೀವೂ ಹುಡುಗಾಟ ಆಡ್ತೀರಿ. (ರಾಮೂ ಕಡೆ ತಿರುಗಿ) ಇದೇನೋ ರಾಮು ಈಗ ಹೀಗೆ ಮಾಡ್ತಿ. (ಸ್ವಲ್ಪ ರೇಗಿ) ಅವತ್ತೊಪ್ಪಿ-ಕೊಂಡಾಗ ಬುದ್ಧಿ ಎಲ್ಲಿ ಹೋಗಿತ್ತೊ?

ರಾಮು :— ಅಲ್ಲಕ್ಕಾ!

ಅಕ್ಕ :— ಏನಲ್ಲಾ (ರೇಗಿ) ಯಾವುದಕ್ಕೂ ಹೊತ್ತು ಗೊತ್ತು ಇದೆಯೋ ಇಲ್ವೊ. ಅವತ್ತೊಪ್ಕೊಂಡು ಟೆಲಿಗ್ರಾಂ ಕೊಟ್ಟೆ. ಇವತ್ತು ಬಂಧು

ಬಳಗಾನೆಲ್ಲಾ ಕಟ್ಕೊಂಡು ಬಂದಿದ್ದಿ. ವರಪೂಜೆ ನಡೆಯೋ ಸಮಯ. ಈಗಲೇನೋ ನೀನು ಹೆಣ್ಣು ನೋಡೋದು. ಆ!

**ಭಾವ** :— ಲೆ! ಸ್ವಲ್ಪ ತಡಿಯೇ, ತಡಿಯೇ.

**ಅಕ್ಕ** :— (ಕೋಪದಿಂದ) ಏನು ತಡೆಯೋದು. ಏನು ತಡೆಯೋದು ಅಂತೀನೆ, ಏನೋ ಒಂದು ಗುಡ್ಡೆ ಗೋಪಾಳ ಅಂತ ಬಿ. ಏ. ಪ್ಯಾಸು ಮಾಡಿ ಬಿಟ್ಟಾಕ್ಷಣಕ್ಕೆ ಮಾನ ಮರ್ಯಾದೆ ಗೊತ್ತಾಗುತ್ತೇನು ಈ ಹುಡುಗರಿಗೆ. ಅಲ್ಲೊ! ಹೇಳೋದು, ಕೇಳೋದು, ಹಿರೇರು ಕಿರೇರು ಯಾರೂ ಇಲ್ಲೇನೋ ನಿಂಗೇ?

**ಭಾವ** :— ಇಲ್ಲಾ ಅಂತಾ ಹೇಳೋಕಾಗುತ್ತ್ಯೇನೆ? ನೀನೇ ಇದ್ದಿಯಲ್ಲೇ ಎದುರಿಗೆ.

**ಅಕ್ಕ** :— ಸಾಕು ಸುಮ್ಮನಿರೀಂದ್ರೆ. ನನ್ನ ರೇಗಿಸ್ಬೇಡಿ (ರಾಮೂಗೆ) ಅಲ್ಲೋ ರಾಮೂ ನೀನೇನೋ ಮನ್ಮಥನ ಹಾಗಿರೋದು?

**ಭಾವ** :— ಅಲ್ಲಾ, ಅವನಿಗೇನೆ ಆಗಿರೋದು, ಗಂಡಸು. ಹೇಗಿದ್ರೇನೆ?

**ಅಕ್ಕ** :— ನೋಡಿ, ನನ್ನ ರೇಗಿಸ್ಬೇಡಿ.

**ಭಾವ** :— ರೇಗೇ ಬಿಟ್ಟಿದ್ದೀಯಲ್ಲೇ. ಇನ್ನ ಬೇರೆ ರೇಗಿಸೋಕಾಗುತ್ತೇನೇ? (ತಾನೂ ಸ್ವಲ್ಪ ರೇಗಿದವನಂತೆ) ಇಲ್ಲಿ ನೋಡು, ನಾನು ಹೇಳೋದು ಕೇಳ್ತೀಯೋ, ಅಥವಾ ಹೊರಟು ಹೋಗ್ತೀಯೋ?

**ಅಕ್ಕ** :— ಅದೇನು ಹೇಳಿ.

**ಭಾವ** :— ಸ್ವಲ್ಪ ಸಮಾಧಾನ ತಂದ್ಕೊ ಮೊದಲು.

**ಅಕ್ಕ** :— (ಸ್ವಲ್ಪ ಸಮಾಧಾನದಿಂದ ಮೆಲ್ಲಗೆ) ಅಲ್ಲಾ, ಆ ಬೀಗರು ಏನಂದು ಕೊಂಡಾರಂದ್ರೆ?

**ಭಾವ** :— ಅವರಿಗಿಂತ ಮೊದಲು ನೀನೇ ಕುಣಿದಾಡ್ತಾ ಇದ್ದಿಯಲ್ಲೇ. ಇಲ್ಲಿ ನೋಡು, ನೀನು ಸುಮ್ಮನಿರು. ನಾನೆಲ್ಲ ಸರಿ ಮಾಡ್ತೇನೆ.

**ಅಕ್ಕ** :— ಏನು ಸುಮ್ಮನಿರೋದೋ ಕಾಣೆ.

**ಭಾವ** :— ಅಗೋ ಪುರೋಹಿತ ಬರ್ತಾ ಇದ್ದಾನೆ.

**ಪುರೋಹಿತ** :— (ಭಾವನಿಗೆ) ಓಹೋ! ಯಾವಾಗ ಬರೋಣಾಯಿತು?

**ಭಾವ** :— ಈಗಲೇ ಬಂದೆ.

**ಪುರೋಹಿತ** :— (ರಾಮೂಗೆ) ಮಗೂ! ರಾಮು! ಇದೇನೋ ಮಗು? ಹೀಗೆ ಹರಟೆ ಬಡೀತಾ ಕೂತು ಬಿಟ್ಟೆದ್ದಿ. ಹೊತ್ತಾಯ್ತು ಮಗು. ವರಪೂಜೆಗೆ. ಏಳಪ್ಪಾ!

**ಭಾವ** :— ಪುರೋಹಿತರೆ!

**ಪುರೋಹಿತ** ;— ಏನು ಸ್ವಾಮಿ!

**ಭಾವ** : — ನಿಮ್ಮನ್ನೋಡಿದ್ರೆ ನನಗೆ ಏನ್ನೋ ಸಂತೋಷ ನೋಡಿ.

**ಪುರೋಹಿತ** :— (ನಕ್ಕು) ಅದೇನು ಸ್ವಾಮಿಾ!

**ಭಾವ**:— ಈಗ ನೋಡಿ. ಮದುವೆ ಮನೆಯಲ್ಲಿ ಗಂಡಿನೋರು ಹೆಣ್ಣಿನೋರು ಎಲ್ಲಾ ಪುರೋಹಿತರು ಹೇಳಿದ ಹಾಗೇ ನೋಡಿ. ಗಂಡು ಹೆಣ್ಣು ಮೊದಲುಗೊಂಡು ಪುರೋಹಿತರು ಏಳು ಅಂದರೆ ಏಳಬೇಕು. ಕೂಡು ಅಂದರೆ ಕೂಡಬೇಕು. ಏನಂತೀರಿ ಹೌದೋ ಅಲ್ಲವೋ?

**ಪುರೋಹಿತ**:— (ಪ್ರೀತನಾಗಿ ನಗುತ್ತ) ಅಹಹ. ಏನೋ ಒಂದು ಕಾಲ ಸ್ವಾಮಿ ನಡೆಯುತ್ತೆ.

**ಭಾವ**:— ಅರಮನೆ ಗುರುಮನೆ ಅಂತಿಲ್ಲಾ, ಆಧಿಪತ್ಯಾನೇ ನಡಸಿ ಬಿಡ್ತೀರಲ್ರೀ ಎಂಟು ದಿವಸ.

**ಪುರೋಹಿತ** :— (ಹೆಮ್ಮೆಯಿಂದ ಉಬ್ಬಿ) ಅದಕ್ಕೂ ದಕ್ಷತೆ ಬೇಕು ಸ್ವಾಮೀ.

**ಭಾವ** :— ಅಲ್ವೇನ್ರಿ ಮತ್ತೆ.

**ಪುರೋಹಿತ** :— ಉಂಟೇ ಸ್ವಾಮಿಾ.

**ಭಾವ** :— ಅಂದ ಹಾಗೆ, ಒಂದು ಕೆಲಸ ಆಗ ಬೇಕಾಗಿತ್ತಲ್ರಿ ಈಗ.

**ಪುರೋಹಿತ** :— ಅದಕ್ಕೇನು ಸ್ವಾಮೀ ಹೇಳಿ.

**ಭಾವ** :— ಸ್ವಲ್ಪ ಜಾಣತನದ ಕೆಲಸ ನೋಡಿ. ಆದರೂ ನಿಮ್ಮ ಬುದ್ಧಿ ವಂತಿಕೆ. ನಮ್ಮ ಬೀಗರ ಮನೇಲಿ ನಿನುಗಿರುವ ಸಲಿಗೆ, ಅಲ್ಲಿ ನಿಮ್ಮ ಮಾತಿಗಿರೋ ಬೆಲೆ ......ಆ ಎಲ್ಲಾ ನೋಡಿ, ನಿಮ್ಕಿಂದಲೇ ಆ ಕೆಲಸ ಜರುಗಿಸಬೇಕೂಂತ ನಾವೆಲ್ಲಾ ಮನಸ್ಸೂ ಮಾಡಿಬಿಟ್ಟಿದ್ದೇವೆ.

**ಪುರೋಹಿತ** :— ಅದೇನು ಹೇಳಿ ಸ್ವಾಮಿ ಮಾಡೋಣ.

**ಭಾವ** : — ಈಗೊಂದು ಸಮಸ್ಯೆ ಬಂದುಬಿಟ್ಟಿದೆ. ಅದನ್ನ ನೀವೇ ಪರಿಹಾರ ಮಾಡಬೇಕು.

ಪುರೋಹಿತ :— (ಆತುರದಿಂದ) ಅದೇನು ಹೇಳಿ ಸ್ವಾಮಿಾ ಅಂದ್ರೆ.

ಭಾವ :— ಬಹು ಸೂಕ್ಷ್ಮವಾದ ವಿಷಯ. ಸ್ವಲ್ಪ ಏನಾದರೂ ಕೆಲಸ ಕೆಟ್ಟಿತು ಅಂದ್ರೆ ಆ ಮೇಲೆ ಮದುವೇನೇ ನಿಂತು ಹೋಗಬಹುದು.

ಪುರೋಹಿತ :— (ಗಾಬರಿಯಿಂದ) ಆ! ಮದುವೆ! ನಿಂತು ಹೋಗುತ್ತೆ ?

ಭಾವ :— ನಿಲ್ಲೋದಿಲ್ಲ ಕಣ್ರಿ. ಎಲ್ಲಾ ನಿಮ್ಮ ಬುದ್ಧಿವಂತಿಕೆ ಮೇಲಿದೆ ನೋಡಿ.

ಪುರೋಹಿತ :— ನಾನೇನು ಮಾಡಬೇಕು ಹೇಳಿ ಮತ್ತೆ.

ಭಾವ :— ಈಗ ಹುಡುಗನಿಗೆ ಒಂದು ಆಸೆ ಹುಟ್ಟಿಬಿಟ್ಟಿದೆ.

ಪುರೋಹಿತ: — ಪಾಪ! ಪಾಪ! ಹುಡುಗನ ಆಸೆ ಈಗಲ್ಲದೆ ಇನ್ಯಾವಾಗ ಪೂರ್ಣವಾಗಬೇಕು ಹೇಳಿ.

ಭಾವ :— ಅದೇ ಮತ್ತೆ.

ಪುರೋಹಿತ :— ಏನಾಗಬೇಕು ಹೇಳಿಬಿಡಿ ಬೇಗ.

ಭಾವ :— ಅವನು ವರಪೂಜೆಗೆ ಹೊರಡೋದಕ್ಕೆ ಮುಂಚೆ ಒಂದು ಸಲ ಹುಡುಗೀನ್ನ ನೋಡಿ ಬಿಡಬೇಕು ಅಂತ ಹಟಾ ಹಿಡಿದು ಬಿಟ್ಟಿದ್ದಾನೆ.

ಪುರೋಹಿತ:— (ಆಶ್ಚರ್ಯದಿಂದ) ಆ! ಏನು! ಹುಡುಗೀನ್ನೇ! ಈಗ! ವರ ಪೂಜೇಗೆ ಹೊರಟು ನಿಂತಿರೋವಾಗ ?

ಭಾವ :— ನೋಡಿ. ಸಮಯಾ ಸಂದರ್ಭ ಎಲ್ಲಾ ನಮಗೆ ತಿಳಿದಿದೆ. ಹುಡುಗೀನ್ನ ನೋಡೋದು ಈ ಹೊತ್ತಿನಲ್ಲಲ್ಲ ಅಂತ ನನಗೆ ಗೊತ್ತು. ಆದರೆ ಈಗ ನೋಡಿ. ಹುಡುಗ ಈಗಿನ ಕಾಲದೋನು............

ಪುರೋಹಿತ :— ಅದು ಸರಿ ಸ್ವಾಮಿಾ, ಈಗಿನ ಕಾಲದವರೇ ಆಗಲಿ. ಆದರೆ ಮೊದಲೇ ನೋಡಬಹುದಾಗಿತ್ತಲ್ಲ. ಅವರೇನು ತೋರಿಸೋದಿಲ್ಲ ಅಂತ ಅಂತಾ ಇರಲಿಲ್ಲವಲ್ಲಾ.

ಭಾವ :— ಏನೋ ಹಿಂದಿನ ಮಾತು ಬಿಟ್ಟುಬಿಡಿ. ಏನೋ ಆಯ್ತು. ಏನೋ ಫೋಟೋ, ಏನೋ ಒಪ್ಪಿಗೆ, ಏನೋ ಆದದ್ದಾಗಿ ಹೋಯಿತು. ಈಗಿನ ವಿಷಯ ನೋಡಿ.

ಪುರೋಹಿತ :— ಅಲ್ಲಾ ಸ್ವಾಮಿಾ! ಈ ಹುಡುಗನ ಆಸೆ ವಿಷಯ ಹೆಣ್ಣಿನೋರಿಗೆ ಗೊತ್ತಾದರೆ ಅವರೇನು ಅಂದುಕೊಂಡಾರು? ಹೆಣ್ಣಿನವ

ರಾದ ಮಾತ್ರಕ್ಕೆ ಅವರಿಗೇನು ಹೊತ್ತು ಗೊತ್ತು ಮಾನ ಮರ್ಯಾದೆ ಇಲ್ಲವೆ?

**ಭಾವ** :— ನೀವು ಹೇಳೋ ಮಾತೇನೋ ಸರಿ. ಆದರೂ ದೊಡ್ಡೋರು ಏನಾರ ಮಾಡಿ ಹೇಗೋ ಕೆಲಸ ನಡಸಬೇಕು ಅಲ್ವೆ?

**ಪುರೋಹಿತ** :— ಹಾಗಾದರೆ ಏನಾದರೂ ಮಾಡಿಕೊಳ್ಳಿ ಸ್ವಾಮಿ. ನಾನು ಹೋಗುತ್ತೇನೆ.

**ಭಾವ** :— ಹೋಗೋದಕ್ಕೇ ನಾವು ನಿಮ್ಮನ್ನು ಕರೆದದ್ದು?

**ಪುರೋಹಿತ** :— (ಸ್ವಲ್ಪ ಯೋಚಿಸಿ, ಏನೋ ಹೊಳೆದಂತೆ) ಸ್ವಾಮಿ! ಒಂದು ವಿಷಯ. ಯಾರಾದರೂ ಹೊಟ್ಟೆಕಿಚ್ಚಿಗೆ ಏನಾದರೂ ಒಡಕು ವರ್ತಮಾನ ಹುಟ್ಟಿಸಿದ್ದಾರೆಯೇನು?

**ಭಾವ** :— (ಕುತೂಹಲದಿಂದ) ಅಂಥಾದ್ದೇನಾದ್ರೂ ಇದೆಯೇನ್ರಿ?

**ಪುರೋಹಿತ** :— ಏನು ಮಾತನಾಡುತ್ತೀರಿ ಸ್ವಾಮಿ. ಪ್ರಸಿದ್ಧವಾದ ದೊಡ್ಡ ಮನೆತನದಲ್ಲಿ ಹುಟ್ಟಿ, 'ಧರ್ಮರಾಜ, ಧರ್ಮರಾಜ' ಅಂತ ಊರಿಗೆ ಊರೇ ಹೊಗಳುತ್ತಿರೋ ಶಿರಸ್ತೇದಾರ್ ರಾಮರಾಯರ ಮನೇಲಿ ಒಡಕು....ಒಡಕು ಅಂದ್ರೇನು ಸ್ವಾಮಿ ಹುಚ್ಚು, ಹುಚ್ಚು.

**ಭಾವ** :— ಮನೆತನ ಒಳ್ಳೇದು. ಜನ ಒಳ್ಳೆವ್ರು. ಹುಡುಗೀನೂ ಲಕ್ಷಣವಂತೆ ಅಂತ ಕೇಳಿದ್ದೇವೆ.... .......

**ಪುರೋಹಿತ** :— (ನಡುವೆ ಬಾಯಿಹಾಕಿ) ಲಕ್ಷಣವಂತೆ! ರತಿ. ರತಿಯಂಥ ಹುಡುಗಿ ಸ್ವಾಮೀ.

**ಭಾವ** ;— ಸರಿ ಹಾಗಿದ್ದ ಮೇಲೆ ಯೋಚನೆಯಾಕ್ರಿ? ಒಂದು ನಿಮಿಷ ಹಾಗೆ ಕರಕೊಂಡು ಬಂದು ತೋರಿಸಿ ಬಿಟ್ಟು ಹೊರಟು ಹೋದರಾಯಿತು.

**ಪುರೋಹಿತ** :— ಯಾರಾದರೂ ಈ ಮಾತಿಗೆ ಒಪ್ಪುತ್ತಾರೇನು ಸ್ವಾಮಿ?

**ಭಾವ** :— ಇಲ್ಲಿ ನೋಡ್ರಿ. ಈ ಮದುವೆ ಆಗಬೇಕು ಅಂತ ನಿಮ್ಮ ಮನಸಿನಲ್ಲಿದೆಯೋ ಇಲ್ಲವೋಪ್ಪ?

**ಪುರೋಹಿತ** :— ನಾನ್ಯಾತಕ್ಕೆ ಬಂದಿರೋದು.

**ಭಾವ** :— ಸರಿ ಮತ್ತೆ. ಇನ್ನೂ ಒಂದು ಮಾತು ನಾನೇ ಹೇಳಿ ಬಿಡ್ತೇನೆ; ಕೇಳಿ. ಮದುವೆ ನಿಲ್ಲಿಸಬೇಕೂಂತ ನಮ್ಮಿಷ್ಟ ಅಲ್ಲ ಹುಡುಗನ್ನ ಒಪ್ಪಿಸೋ ಭಾರ ನನಗಿರಲಿ. ಆದರೆ ಈಗಿನ ಕಾಲದ ಹುಡುಗರ ಮನಸ್ಸೇ ಒಂದು ರೀತಿ ನೋಡಿ, ಒಂದು ಕ್ಷಣ ಅವರು ಬಂದು ಹೋಗಲಿ ಅಷ್ಟೆ. ಮತ್ತೂ, ನಿಜವಾಗಿ ಹೇಳ್ತೇನೆ. ನಿಮ್ಮ ವಿನಾ ಇನ್ಯಾರಿಂದಲೂ ಈ ಕೆಲಸ ಆಗೋದಲ್ಲ, ಆಗೋದಲ್ಲಾಂತ.

**ಪುರೋಹಿತ** :— (ಅನುಮಾನದಿಂದ) ಅವರು ಒಪ್ಪುತ್ತಾರೇನು ಸ್ವಾಮಿ, ರೇಗಿ ಬಿಟ್ರೆ?

**ಭಾವ** :— ಅದರಲ್ಲೇ ನಿಮ್ಮ ಬುದ್ಧಿವಂತಿಕೆ ಇರೋದು ಮತ್ತೆ. ಇಲ್ಲೀ ವಿಷಯಾನೆಲ್ಲಾ ಅವರಿಗೆ ಸರಿಯಾಗಿ ತಿಳಿಸಿ. ಅವರನ್ನ ಕರಸ್ತಾ ಇರೋದು ಮದುವೇ ನಿಲ್ಲಿಸೋದಕ್ಕಲ್ಲ, ನಡಸೋದಕ್ಕೇ ' ಅಂತನ್ನೋ ವಿಷಯಾನ್ನ ಅವರಿಗೂ ಚೆನ್ನಾಗಿ ಮುಂದಟ್ಟು ಮಾಡಿಕೊಟ್ಟು ಅವರನ್ನ ಒಪ್ಪಿಸಿ, ಅವರನ್ನು ಕರಕೊಂಡು ಬರೋ ಭಾರ ನಿಮ್ಮದು.

**ಪುರೋಹಿತ** :— ಏನೋಪ್ಪ ಹೋಗಂತೂ ಹೋಗ್ತೇನೆ.

**ಭಾವ** :— ಇಲ್ಲ ನೋಡಿ, ಇನ್ನೂ ಒಂದು ವಿಷಯ ಇದನ್ನ ಸುಮ್ಮನೆ ಎಲ್ಲರ ಮುಂದೂ ಹೇಳಬೇಡಿ. ಗುಟ್ಟಾಗಿ ಶಾಮರಾಯರಿಗೆ ತಿಳಿಸಿ. ಅವರೂ ಗುಟ್ಟಾಗೇ ಬಂದು ಹೋಗಲಿ.

**ಪುರೋಹಿತ** :— ಏನೋಪ್ಪ, ದೇವರೇ ಸರಿ ಮಾಡಿಸಬೇಕು.

**ಭಾವ** :— ಹೋಗಿ ಹೋಗಿ ಎಲ್ಲಾ ಸರಿ ಹೋಗುತ್ತೆ ಹೋಗಿ.

**ಪುರೋಹಿತ** :— ಹೂ (ಹೋಗುವನು)

**ಭಾವ** :— ಅಬ್ಬ! ಈ ಪುರೋಹಿತನನ್ನ ಒಪ್ಪಿಸಿ ಕಳಿಸೋದಕ್ಕೆ ಇಷ್ಟು ಗಿಲೀಟು ಮಾಡಬೇಕಾಯಿತು. ನೋಡಿದಿಯೇನೋ ರಾಮು, ನಿನ್ನ ಹಟದ ಪ್ರಭಾವಾನ.

**ರಾಮು** :— (ಇಷ್ಟು ಹೊತ್ತು ಏನೋ ಪೇಪರ್ ಹಿಡಿದುಕೊಂಡು ಓದುತ್ತಿದ್ದಂತೆ ನಟಿಸುತ್ತಿದ್ದವನು) ಇನ್ನೊಬ್ಬರ ಕೈಲಿ (ಮೆಚ್ಚಿಕೆಯಿಂದ) ಇಷ್ಟೆಲ್ಲಾ ಆಗೋಲ್ಲ, ಭಾವ.

**ಭಾವ** :— ಲೋ ! ನಂಗೇ ಕಲಿಸೋದಕ್ಕೆ ಬರ್ತೀಯೇನೋ ಆ ಹೊಗಳಿಕೆ ಎಲ್ಲಾ ಅಲ್ಲಿಡು.

**ರಾಮು** :— ಆದಿರಲಿ ಭಾವಾ ! ಈಗೇನೋ ದಾಳ ಉರುಳಿಸಿದ್ದಾಯ್ತು ಅನ್ನು. ಯಾವಾಗಾರ ಬೀಳುತ್ತೋ ನೋಡಬೇಕು. ಒಂದು ವೇಳೆ.... ಅಲ್ಲಾ ಒಂದು—ವೇಳೆ ಅವರೇನಾದ್ರೂ " ಊಹು. ಅಂದುಬಿಟ್ರೆ " ?

**ಭಾವ**:— ಉತ್ತರ ಬರಲಿ ತಾಳೋ, ಆ ಮೇಲೆ ನೊಡೋಣ.

**ರಾಮು** :— ಅದ: ಸರಿ. ಈಗ ಅಕ್ಕ ಏನೋ ಒಳಗೆ ಹೋದಳು. ಅದೇನು ಗಲಾಟೆ ಹಚ್ಚಿ ಬಿಟ್ಟಿದ್ದಾಳೋ.

**ಭಾವ** :— ಹೌದು ಕಣೋ ರಾಮು. ಅವಳಿಗೆ ಈ ಪ್ರಸ್ತಾಪ ಮಾಡಬೇಡ ಅಂತ ಮೊದಲೇ ಹೇಳಿ ಕಳಿಸಬೇಕಾಗಿತ್ತು.

**ರಾಮು** :— ಅಮ್ಮ ಏನೋ ಮನೇಲಿಲ್ಲ. ಕರಿಯೋದಕ್ಕೋ ಏನೋ ಹೋಗಿದ್ದಾಳೆ. ಒಳಗಡೆ ಏನೋ ಅಪ್ಪನ ಸದ್ದು ರೇಗಾಟ ಕೇಳ್ತಾ ಇದೆ. ಅವನಿಗೆ ಹೇಳಿ ಬಿಟ್ಟಿದ್ದಾಳೋ ಏನೋ.

**ಭಾವ** :— ಹೇಳಲಿ ಸುಮ್ಮನಿರು. ನೀನೂ ಸ್ವಲ್ಪ ಗಂಡಸುತನ ತೊಗೊ. ಈಗಲ್ಲದೆ ಇನ್ಯಾವಾಗ ನಿನ್ನ ಮಾತು ನಡೆಯಬೇಕು.

**ರಾಮು** :— ಅವನೇ ಬರ್ತಾ ಇದ್ದ ಹಾಗಿದೆ.

[ರಾಮು ತಂದೆ ಪ್ರವೇಶಿಸುವನು. ಅವನಿಗೆ ೫೫-೬೦ ರ ವಯಸ್ಸು ಆದರೂ ದೃಢವಾದ ಮೈಕಟ್ಟು. ಬಲವಾದ ನರೆತ ಮೀಸೆ. ಪೋಲೀಸು ಇಲಾಖೆಯಲ್ಲಿ ಇದ್ದುದರಿಂದ ಆ ದರ್ಪವಾಣೆಯಿಂದಲೇ ಮಾತನಾಡುತ್ತಾನೆ.]

**ತಂದೆ** :— ಏನೋ ರಾಮು ! ಹುಚ್ಚುಚ್ಚಾಗಿ ಆಡ್ತಾ ಇದ್ದೀಯಂತೆ. ಏನು ಸಮಾಚಾರ ಅದು ?

**ರಾಮು** :— (ಸಣ್ಣ ದನಿಯಲ್ಲಿ) ಏನೂ ಇಲ್ಲಪ್ಪ.

**ತಂದೆ** :— ಈಗ ಹುಡುಗೀನ್ನ ನೋಡಬೇಕು ಅಂದೆಯೇನೋ ?

**ರಾಮು** :— (ಮೆಲ್ಲಗೆ) ಹೂ.

**ತಂದೆ** :— ಹೂ. ಹೂ. ಎಷ್ಟು ಧೈರ್ಯವಾಗಿ ಹೇಳ್ತೀಯೋ ? ಹಿರೇರ್‍ಯಾರೂ ಇಲ್ಲವೇನೋ ನಿಂಗೆ ?

**ಭಾವ** :— ಮಾವ ! ಅವನು ಹುಟ್ಟಿದಾಗಿನಿಂದ ನಿಮ್ಮ ಪೋಲೀಸುದರ್ಪಾನ

ಅವನ ಮೇಲೆ ಬೀದೀ ಬೀದೀ ಅವನ ಗಂಡಸುತನಾನ್ನೇ ನುಂಗಿ ಬಿಟ್ಟಿದ್ದೀರಿ. ಮದುವೆಯಾಗೋ ಹುಡುಗ, ತಾನು ಮದುವೆಯಾಗಿ ಸಾಯೋತನಕಾ ಸಂಸಾರ ನಡಸಬೇಕಾದ ಹೆಂಡತೀನ್ನ ಒಂದು ಸಲ ನೋಡಿ ಮದುವೆಯಾಗಬೇಕೋ ಇಲ್ಲವೋ ಹೇಳಿ.

**ತಂದೆ** :— ನೋಡೋದಿದ್ರೆ ಅವತ್ತೇ ನೋಡಬೇಕಾಗಿತ್ತು. ಈಗಲೇ ನೋಡೋದು ಫೋಟೋನ್ನ ನೋಡಲಿಲ್ಲವೆ ?

**ಭಾವ** :— ಫೋಟೋನ್ನ ನೋಡಿದ್ದೇನೋ ಸರಿ. ಮಾವ, ಆದರೆ ಮದುವೆ ಆಗೋದು ಹುಡುಗೀನ್ನ. ಅವಳನ್ನ ಒಂದು ಸಲ ನೋಡಬೇಕೋ ಇಲ್ಲವೋ ?

**ತಂದೆ** :— ಅದೇನೋ ಈಗಿನ ಕಾಲದ ಹುಡುಗರು ಕೆಟ್ಟು ಹಾಳಾಗಿ ಹೋಗಿದ್ದಾರೆ. ನಮ್ಮ ಕಾಲದಲ್ಲಿ ನಾವೆಲ್ಲಾ ನೋಡೀ ನೋಡೀ ಮದುವೆ ಮಾಡಿಕೊಂಡೆವೆ ? ನೀನು ನೋಡಿದ್ದೆಯಾ ಮೊದಲು ?

**ಭಾವ** :— ನಿಮ್ಮ ಕಾಲ ನಮ್ಮ ಕಾಲ, ಎಲ್ಲಾ ಹಿಂದಿನ ಮಾತು ಬಿಡಿ ಮಾವ. ದಿನ ದಿನಕ್ಕೆ ನವನಾಗರೀಕತೆ ಹೆಚ್ಚುತ್ತಿರೋ ಈ ಕಾಲದಲ್ಲಿ ಹುಡುಗ ಹುಡುಗೀನ್ನ—ನೋಡದೆ ಅದೆಂಥಾ ಮದುವೆ.

**ತಂದೆ** :— ಹಾಗೆ ನೋಡಬೇಕಾಗಿದ್ರೆ ಅವತ್ತೇ ನೋಡಬೇಕಾಗಿತ್ತು ಅಂತೇನೆ.

**ಭಾವ** :— ನೀವು ಅವನಿಗೊಂದು ಅವಕಾಶ ದೊರಕಿಸಿ ಕೊಟ್ಟಿದ್ದರೆ ತಾನೆ.

**ತಂದೆ** :— ನಾನೇನು ಒದಗಿಸಿ ಕೊಡೋದು. ಫೋಟೋ ಕಳಿಸಿದಾಗ ಹುಡುಗೀನ್ನ ನೋಡಬೇಕು ಅಂದಿದ್ದರೆ ನಾನು ಅದಕ್ಕೆ ಅಡ್ಡ ಬರ್‍ತಾ ಇದ್ನೆ ?

**ರಾಮು** :— ( ಅವರ ಜಗಳಾ ನಿಲ್ಲಿಸಬೇಕೆಂದು ) ಈಗೇನಪ್ಪಾ ನೀನು ಹೇಳೋದು ?

**ತಂದೆ** :— ನೀನು ನೋಡಿದೆಯೋ ಬಿಟ್ಟೆಯೋ ಅದೊಂದು ಘಟ್ಟ ಕಳೆದು ಹೋಯ್ತು. ಮದುವೇಗೆ ಅಂತ ಬಂದಿದ್ದಾಗಿದೆ. ಈಗ ಹುಡುಗೀನ್ನ ನೋಡಬೇಕು ಅನ್ನೋದು ಸರಿಯಲ್ಲ. ಅದು ತಪ್ಪು.

**ಭಾವ** :— ಅದರಲ್ಲೇನು ತಪ್ಪು ಮಾವ ? ಹುಡುಗನಿಗೆ ತಾನು ಮದುವೆಯಾಗೋ ಹೆಣ್ಣನ್ನ ನೋಡಲಿಕ್ಕಿಲ್ಲವೆ ? ಇದೆಂತಹ ಮದುವೆ ?

**ತಂದೆ:**— ಇಗೋ ನನ್ನ ರೇಗಿಸಬೇಡ್ರಿ, ನೀವು ಹುಡುಗರು ನಿಮಗ ತಿಳೀದು. ಅದೆಲ್ಲಾ ಗೌರವ ಅಲ್ಲ. (ರಾಮೂ ಕಡೆ ತಿರುಗಿ) ರಾಮೂ!

**ರಾಮು:**— ಏನಪ್ಪಾ.

**ತಂದೆ:**— ನನ್ನ ಮಾತಿನಲ್ಲಿ ನಿನಗೆ ನಂಬ್ಕೆ ಇದ್ಯೋ ಇಲ್ವೋ ಹೇಳು.

**ರಾಮು:**— ಇದೆಯಪ್ಪಾ

**ತಂದೆ:**— ಸರಿ ಮತ್ತೆ ನನ್ನ ಮಾತು ಕೇಳು. ಹುಡುಗಿ ಲಕ್ಷಣವಾಗಿದೆ. ಸುಂದರವಾಗಿದೆ, ಯಾರೂ ಬೇಡ ಅನ್ನೋ ಹಾಗಿಲ್ಲ. ನನ್ನ ಮಾತು ನಂಬು. ನಾನದನ್ನೆಲ್ಲ ಕೇಳಿ ವಿಚಾರಿಸಿದ್ದೇನೆ.

**ರಾಮು:**— ಅದೇನೋ ಸರೀಪ್ಪ.

**ತಂದೆ:**— ದೊಡ್ಡ ವಂಶ. ಒಳ್ಳೆ ಸಂಪ್ರದಾಯಸ್ಥರ ಮನೆ ಹುಡುಗಿ.

**ರಾಮು:**— ಹೂ.

**ತಂದೆ:**— (ಸಮಾಧಾನವಾಗಿ) ನಿನ್ನ ಮನಸ್ಸು ಹೀಗೆ ಅಂತ ತಿಳಿಸಿದ್ದರೆ ಆಗ ಅದಕ್ಕೆ ತಕ್ಕ ಏರ್ಪಾಟು ಮಾಡ್ತಾ ಇದ್ದೆ. ಆದರೆ ಈಗಲೂ ಖಂಡಿತ ವಾಗಿ ಹೇಳ್ತೇನೆ. ನೀನು ನೋಡಬೇಕಾದ್ದಿಲ್ಲ. ಹುಡುಗಿ ವಿಷಯಕ್ಕೆ, ಅವಳ ರೂಪ, ವಂಶ ಎಲ್ಲಾದಕ್ಕೂ ನಾನು ಜವಾಬ್ದಾರಿ ವಹಿಸಿಕೊಳ್ತೇನೆ. ನಮಗೂ ಮಾನ ಮರ್ಯಾದೆ ಇದೆಯೋ ಇಲ್ಲವೋ ಈ ಹೊತ್ತಿನಲ್ಲಿ ಹುಡುಗೀನ ಕರಕೊಂಡು ಬಂದು ತೋರಿಸಿ ಅಂತಂದ್ರೆ, ಅವರೇನು ತಿಳಿದುಕೊಂಡಾರು? ನಮ್ಮ ಮಾನ ಎಲ್ಲೀಗೆ ಬಂತು? ನೀನೂ ಬುದ್ಧಿ ತಿಳಿದ ಹುಡುಗ, ಸ್ವಲ್ಪ ಯೋಚಿಸಿ ನೋಡು. ನಮಗೂ ಗೌರವ ಕೊಡು. ನೀನೂ ಗೌರವ ಸಂಪಾದಿಸು.

**ರಾಮು:**— ಅದೇನೋ ಹೋಗಲಿ ಸರಿ. ಬಿಟ್ಟುಬಿಡೋಣ ಅಂದ್ರೆ ಅದಕ್ಕೂ ಈಗ ಸಾಧ್ಯವಿಲ್ಲವಲ್ಲಪ್ಪ.

**ತಂದೆ:**— ಏನೂ ಸಾಧ್ಯವಿಲ್ಲಾ! ಹಾಗಂದ್ರೇನೋ!

**ಭಾವ:**— ನೋಡಿ ಮಾವಾ, ನಿಮ್ಮ ಹತ್ರ ಮುಚ್ಚುಮರೆ ಏನು! ನಡೆದಿರೋ ವಿಷಯಾನ ಹೇಳಿ ಬಿಡ್ತೇವೆ. ಈವಾಗಾಗ್ಲೇ 'ಹುಡುಗಿನ್ನ ಕರಕೊಂಡು ಬಂದು ತೋರಿಸ್ಬಿಡಿ' ಅಂತ ಹೇಳಿ ಕಳಿಸಿದ್ದಾಗಿದೆ. ಇನ್ನೇನು ಅವರೂ ಬರೋ ಹೊತ್ತು.

**ತಂದೆ** :— ( ಆಶ್ಚರ್ಯ ಕೋಪಗಳೊಡನೆ ) ಆ ! ಏನು ಏನು ! ಆಗಲೇ ಇಷ್ಟು ಕೆಲಸ ನಡೆದಿದೆಯೊ ಶುದ್ಧ ಹುಡುಗು ಸಹವಾಸ, ಶುದ್ಧ ಹುಡುಗು. ದೊಡ್ಡೋರು ಇನ್ನೀ ಮನೇಲಿರೋದೇ ತಪ್ಪು. ನಮ್ಮ ಯಜಮಾನಿಕೆ ಕಳಕೊಂಡ ಮನೇಲಿ ನಾವಿನ್ನಿರಬಾರದು.

**ಭಾವ** :— ಆದದ್ದು ಆಗಿಹೋಯ್ತು ಮಾವ.

**ತಂದೆ** :— ಇನ್ನು ನನ್ನ ಮುಖಾನ್ನ ಅವರಿಗೆ ಹೇಗೆ ತೋರಿಸಲಿ.

**ಭಾವ** :— ನೋಡಿ ಮಾವ. ನಾ ನಿಮಗೊಂದುಪಾಯ ಹೇಳ್ತೀನೆ ಕೇಳಿ. ನಿಮಗೂ ಅಪಖ್ಯಾತಿ ತಪ್ಪುತ್ತೆ. ಯಜಮಾನಿಕೇನೂ ಉಳಿಯುತ್ತೆ.

**ತಂದೆ** :— ಏನದು?

**ಭಾವ** :— ನೀವೀಗ ಮನೆ ಬಿಟ್ಟು ಸ್ವಲ್ಪ ಹೊತ್ತು ಎಲ್ಲೋ ಹೊರಗೆ ಹೋಗಿಬಿಡಿ, ನಿಮಗೆ ಈ ವಿಷಯಾನೇ ಗೊತ್ತಿಲ್ಲದ ಹಾಗೆ ಇರಿ. ನಾವೆಲ್ಲಾ ಸರಿಪಡಿಸಿ ಬಿಡ್ತೀವೆ.

**ತಂದೆ** :— ಹೌದು ! ಅವರು ಈಗ ಬರ್ತಾರೋ ?

**ಭಾವ** :— ಬಂದರೆ ಸರಿ. ಬರದೆ ಕೋಪ ಮಾಡಿಕೊಂಡರೆ ನೀವಿದ್ದೀ ಇದ್ದೀರಿ. ನಮ್ಮನ್ನ ಬೈದ ಹಾಗೆ ಮಾಡಿ, ಅವರನ್ನ ಸಮಾಧಾನ ಪಡಿಸೋಕೆ.

**ರಾಮು** :— ( ಮೆಚ್ಚಿಗೆಯಿಂದ ) ಒಳ್ಳೆ Diplomat ಕಣೊ ಭಾವ ನೀನು.

**ತಂದೆ** :— ( ರೇಗಿ ) ಮುಚ್ಚು ಬಾಯಿ ಸಾಕು. ಶುದ್ಧ ಹುಡುಗು, ಶುದ್ಧ ಹುಡುಗು.

**ಭಾವ** :— ಅವರು ಬಂದಾರು. ನೀವು ಹೊರಡಿ ಮತ್ತೆ.

**ತಂದೆ** :— ಇಗೋ ಹೊರಟೆ. ( ಬಾಗಿಲವರೆಗೂ ಹೋಗಿ ಪುನಃ ಹಿಂದಿರುಗಿ ಬಂದು ) ಅಂದಹಾಗೆ ಯಾರ ಕೈಲಿ ಹೇಳಿ ಕಳಿಸಿದ್ದೀರಿ.

**ರಾಮು** :— ಭಾವ ಪುರೋಹಿತರಿಗೆ ಸ್ವಲ್ಪ ಖುಷಿ ಮಾಡಿ ಕಳಿಸಿದ್ದಾನೆ.

**ತಂದೆ** :— ಸರಿ. ನಾನು ಹೊರಡ್ತೀನೆ ಇನ್ನ. ( ಭಾವನಿಗೆ ) ಈ ಜವಾಬ್ದಾರಿ ಎಲ್ಲಾ ನಿಂದೇ.

**ಭಾವ** :— ನೀವಾ ಯೋಚನೆ ಬಿಟ್ಟುಬಿಡಿ ಮಾವಾ. ರಾಮು ಹೇಳ್ದಾಪ್ಪೊ ಹಾಗೆ ಮಾಡಿ. ಈ ದಿನ ಇನ್ನರ್ಧ ಘಂಟೆಯೊಳ್ಗೆ ವರಪೂಜೆ ನಡಸಿ ನಾಳೆ ಮದುವೇ ಮಾಡಿಸೋ ಭಾರ ನನ್ನದಿರಲಿ.

**ತಂದೆ** :— ಏನೋ ದುಡುಕಿ ಬಿಟ್ಟಿದ್ದೀರಿ. ಹುಷಾರಾಗಿರಿ. ( ಹೋಗುವನು )

**ರಾಮು** :— ಇಷ್ಟೊತ್ಗೆ ಬರಬೇಕಾಗಿತ್ತಲ್ವೇ ಭಾವಾ.

**ಭಾವ**:— ಬರಬೇಕಾಗಿತ್ತು. ಆದರೆ ಅಲ್ಲೇನು ಗಲಾಟೇನೋ, ತುಂಬ ರಗಳೆ ರಾದ್ಧಾಂತ ಆಗಿರಬೇಕು ಈ ಹೊತ್ತಿನಲ್ಲಿ ಹುಡುಗೀನ್ನ ನೋಡ ಬೇಕು ಅಂತಂದ್ರೆ, ಅವರೇನಂದುಕೊಂಡಾರು. ಅವರಿಗೂ ಸಂಶಯ. ಮದುವೆ ನಡೆಯುತ್ತೋ ಇಲ್ವೋ ಅನ್ನೋ ಹೆದರಿಕೆ.

**ರಾಮು** :— ಏನೋ ನಾವು ಸುಮ್ಮನಿದ್ದಿದ್ದರೇ ಆಗಿತ್ತು ಅಂತಾ ಅನಿಸ್ತಾ ಇದೆ ಈಗ.

**ಭಾವ** :— ಅಗೋ ಅದಕ್ಕೇ ಹುಡುಗು ಸಹವಾಸ ಅನ್ನೋದು. ಆವಾಗ ಹಾಗಂದಿ. ಈಗ ಹೀಗಂತಿ. ಒಂದು ಕೆಲಸಕ್ಕೆ ಮನಸ್ಸು ಮಾಡಿದಮೇಲೆ ಆದರಲ್ಲಿ ಅರೆಮನಸ್ಸಿರಬಾರದು.

**ರಾಮು** :— ಏನೋ ಆಯಿತಲ್ಲ. ಬಿಡು ಭಾವಾ. ಇಗೋ ! ಪುರೋಹಿತರೂ ಬಂದರಲ್ಲಾ.

[ಪುರೋಹಿತ ಆವಸರವಸರವಾಗಿ ಬರುವನು.]

**ಪುರೋಹಿತ**:— ಸಾಕಪ್ಪಾ ಸಾಕು ಈ ರಾಯಭಾರ.

**ಭಾವ**:— ಬನ್ನಿ ಬನ್ನಿ. ಏನು ಹಣ್ಣೋ ಕಾಯೋ ?

**ಪುರೋಹಿತ**:— ನಾನು ಕೈ ಹಾಕಿದಮೇಲೆ ಕಾಯಿ ಅಂತ ಉಂಟೆ ಸ್ವಾಮಿ, ಹಣ್ಣೇ.

**ರಾಮು** :— ಸಂತೋಷ.

**ಭಾವ** :— ಬೀಗರು ಏನಂದ್ರು ?

**ಪುರೋಹಿತ**:— ಏನು ಹೇಳಲಿ ಸ್ವಾಮಿ, ಅವರನ್ನ ಒಪ್ಪಿಸಬೇಕಾಗಿದ್ರೆ ಕಲಿತ ಬುದ್ಧಿಯೆಲ್ಲಾ ಖರ್ಚಾಯ್ತು.

**ಭಾವ** :— ನೀವು ಬುದ್ಧಿವಂತರು ಅಂತ ನನಗೆ ತಿಳಿಯದೆ ?

**ರಾಮು** :— ಹಾಗಾದರೆ ಮೊದಲು ಒಪ್ಪಲಿಲ್ಲ ಅನ್ನಿ.

**ಪುರೋಹಿತ**:— ಏನು ಮಾತು ಹೇಳ್ತೀ ಮಗು. ಯಾರಾದರೂ ಒಪ್ಪೋ ಮಾತೇ ಹೇಳು.

**ರಾಮು**:— ಆ ಮೇಲೆ ಹೇಗೆ ಒಪ್ಪಿದರು ?

**ಪುರೋಹಿತ**:— ಒಂದು ಚಮತ್ಕಾರ ನಡೆಯಿತು ನೋಡು ಮಗು.

**ರಾಮು**:— ಚಮತ್ಕಾರ.

**ಪುರೋಹಿತ**:— ಹೂ.

**ಭಾವ**:— ಏನದು ಹೇಳಿ.

**ಪುರೋಹಿತ**:— ನೋಡಿ ಮೊದಲು ಇಲ್ಲಿ ನಡೆದ ವಿಷಯಾನೆಲ್ಲಾ ಶಾಮರಾಯರ ಮುಂದೆ ಹೇಳಿದೆ. ಅವರಿಗೆ ರೇಗಿ ಹೋಯಿತು. ನಾನೆಷ್ಟೋ ಹೇಳಿದೆ. ಆದರೂ ಉಪಯೋಗವಾಗಲಿಲ್ಲ. ಮದುವೆ ನಿಂತು ಹೋಗೋ ಪ್ರಸ್ತಾಪಾನೂ ಬಂತು ಕಡೆಗೂ ಅವರೇನೋ 'ಪುರೋಹಿತರೆ! ಇಂಥ ಸಮಯದಲ್ಲಿ ನನ್ನನ್ನು ಅವಮಾನ ಪಡಿಸುವವರ ಸಂಬಂಧ ಬೇಡಲೇಬೇಡ, ನಾನು ಹುಡುಗಿನ್ನ ಕರೆತರುವುದಿಲ್ಲಾ ಅಂತ ಹೇಳಿಬಿಡಿ. ಅಂದುಬಿಟ್ಟರು. ಇತರರೂ ಅವರ ಮಾತನ್ನೆ ಅನುಮೋದಿಸಿದರು.

**ಭಾವ**:— ಎಲ್ಲರಿಗೂ ಗೊತ್ತಾಗಿ ಹೋಯ್ತು ?

**ಪುರೋಹಿತ**:— ಮೊದಲು ನಾನೇನೋ ಶಾಮರಾಯರೊಬ್ಬರಿಗೇ ಹೇಳಿದೆ. ಅವರು ರೇಗಾಡಿದರು. ಅದು ಅವರ ಬಂಧು-ಬಳಗಗಳ ಕಿವೀಗೆ ಬಿತ್ತು. ಎಲ್ಲರೂ 'ಇದೇನು ಶುದ್ಧ ಅವಮಾನ' ಅಂತ ಕೂಗಾಡಿದರು.

**ಭಾವ**: — ಆ ಮೇಲೆ ?

**ಪುರೋಹಿತ**:— ಆಗಲೇ ನೋಡಿ ಒಂದು ಚಮತ್ಕಾರ ನಡೆದದ್ದು.

**ರಾಮು**:— ಏನದು (ಕುತೂಹಲದಿಂದ) ಏನದು ?

**ಪುರೋಹಿತ**: — ಅವರ ಮಗು ...

**ರಾಮು**:— ಯಾರು ?

**ಪುರೋಹಿತ**:— ಮದುವೆ ಹುಡುಗಿ, ರತ್ನ....

**ರಾಮು**:— (ಉತ್ಸಾಹದಿಂದ) ಹೂ ಏನು ?

**ಪುರೋಹಿತ**:— ರತ್ನ.... ಎಷ್ಟು ಬುದ್ಧಿವಂತಳು ಅಂತೀರಿ.

**ರಾಮು**:— ಹೂ.

**ಪುರೋಹಿತ**:— ತಂದೆ ಹತ್ರ ಬಂದು ಕೂತುಕೊಂಡಳು. 'ಅಪ್ಪಾ! ನೀನೇನೂ ಅಂದುಕೊಳ್ಳದೇ ಇದ್ರೆ ನಾನೊಂದು ಮಾತು ಹೇಳ್ತೀನೆ, ಅಂದ್ಲು.

**ರಾಮು** :— ಹೂ.

**ಪುರೋಹಿತ** : – ಎಲ್ಲರೂ ಅವರ ಕಡೇನೇ ನೋಡಿದರು. ಶಾಮರಾಯರು ಮಗಳನ್ನು ಹತ್ತಿರಕ್ಕೆ ಕರೆದು 'ಹೇಳು ಮಗು, ನನ್ನ ಹತ್ರ ಯಾಕಮ್ಮಾ ಸಂಕೋಚ ನಿಂಗೆ' ಅಂದ್ರು. ಆಗ ರತ್ನಾ ನಾಚುತ್ತಾ ನಾಚುತ್ತಾ ನೋಡಪ್ಪಾ, ಅವರನ್ನು ಹಿಂದಕ್ಕೆ ಕಳಿಸೋದ್ರಿಂದ ಅವರಿಗಿಂತ ನಮಗೇ ಹೆಚ್ಚು ನಷ್ಟ ಅಂತೇನೆ, ಅಂದ್ಳು. ಶಾಮರಾಯರು ಏಕೆ ಮಗು, ಒಂದು ಸಾವಿರ ರೂಪಾಯಿ ನಷ್ಟ ಆದೀತೆ. ಅದರ ವಿಷಯ ನೀನೇನೂ ಯೋಚಿಸ್ಬೇಡ. ಸರಿಯಾದ ಗೌರವಸ್ಥರ ಮನೇಗೆ ನಿನ್ನ ಸೇರಿಸೋಪಕ್ಕೆ ಇನ್ನೆರಡು ಸಾವಿರ ಖರ್ಚಾದರೂ ಚಿಂತೆಯಿಲ್ಲ. ಅಂದರು. ರತ್ನ 'ರೂಪಾಯಿ ನಷ್ಟ ಅಲ್ಲಪ್ಪಾ ನಿನ್ನ ಮಗಳು ನಾಲ್ಕು ಜನ ನೋಡುವಷ್ಟು ಲಕ್ಷಣವಾಗಿಲ್ಲ ಅಂತ ಅವರು ಸುದ್ದಿ ಹಬ್ಬಿಸಿದರೆ' ಅಂದ್ಳು.

**ಭಾವ** :— (ಆಶ್ಚರ್ಯದಿಂದ) ಆ! ಹಾಗಂದಳೆ! (ರಾಮೂಗೆ) ಭಲಾರೆ ಹುಡುಗಿ ಕಣೋ ರಾಮು. ಅವಳಿಗೂ ಒಂದು ಸಲ ಗಂಡನ್ನ ನೋಡೋಣ ಅನಿಸಿರಬೇಕು, ಏನಂತಿ ?

**ರಾಮು** :— ಅನಿಸಿರಬಹುದು.

**ಭಾವ** :— ವಯಸ್ಸಿಗೆ ಬಂದ ಹುಡುಗಿ, ವಿದ್ಯಾವಂತೆ. ಅವಳಿಗೂ ಕುತೂಹಲ ಆಸೆ, ನ್ಯಾಯವೇ. ಆದರೂ ಒಳ್ಳೆ ಬುದ್ಧಿವಂತಳು ಕಣೋ, ನಾನೇನೋಂತಿದ್ದೆ.

**ರಾಮು** : — ನಿಜ.

**ಭಾವ** : — ಆ ಮೇಲೆ ?

**ಪುರೋಹಿತ** :— ಆ ಮಾತು ಅವರ ಮನಸ್ಸಿಗೆ ನಾಟಿತು ನೋಡಿ. ಆದರೂ ಅವರಿಗೆ ಇನ್ನೂ ಸಮಾಧಾನ ಆಗಲಿಲ್ಲ. ಆಗ, ಮಗಳ ಮಾತನ್ನು ಉತ್ಸಾಹದಿಂದ ಕೇಳುತ್ತಿದ್ದ ಅವಳ ತಾಯಿ, ಗಂಡನ ಕಿವೀಲಿ 'ಮಗು ಇಷ್ಟು ಇಷ್ಟ ಪಟ್ಟಿರೋ ಸಂಬಂಧಾನ್ನ ಮಾನಮರ್ಯಾದೆ ಅಂತ ಏನೋ ಕುಂಟು ನೆಪ ತೆಗೆದು ಮುರೀಬೇಡೀಂದ್ರೆ–ಹೋಗಲಿ, ತೋರಿಸಿಕೊಂಡು ಬಂದುಬಿಡೋಣ' ಅಂದ್ರು.

**ಭಾವ :**— ಸರಿ. ಆ ಮೇಲೆ?

**ಪುರೋಹಿತ :**— ಆ ಮೇಲೇನು, ಹೊರಟಿದ್ದೇ.... ಆದರೆ ಒಂದು ಮಾತು.

**ಭಾವ :**— ಏನು?

**ಪುರೋಹಿತ :**— ಅಲ್ಲೇ ಇನ್ನೊಂದು ಮಾತೂ ಹೇಳಿದ್ದಾರೆ. ಈಗ ಹುಡುಗಿ ಅವರ ತಂದೆ ಶಾಮರಾಯರು ಇಬ್ಬರೇ ಬರ್ತಾರೆ. ಒಂದು ನಿಮಿಷ ಹಾಗೆ ಕೂತಿದ್ದು ಹೊರಟುಹೋಗ್ತಾರೆ. ವೃಥಾ ಮಾತುಕಥೆ ಆಡಬೇಡಿ, ಅವರಿಗೆ ರೇಗಿದೆ.

**ಭಾವ :**— ಆಗಲಿ. ಅಷ್ಟೇ ಸಾಕು. ಒಂದು ನಿಮಿಷ ಹಾಗೆ ಬಂದು ಕೂತು ಹೊರಟು ಹೋಗಲಿ. ಏನೋ ಹುಡುಗುತನ ಅನ್ಸೆ. ಯಾವಾಗ ಬರ್ತಾರೆ?

**ಪುರೋಹಿತ :**— ಆಗೋ! ಒಂದೇ ಬಂದ್ರಲ್ಲಾ.

[ಶಾಮರಾಯರು ರತ್ನಾ ಬರುವರು. ರತ್ನ ಸುಮಾರು ೧೫-೧೬ ವರ್ಷದ ಸುಂದರ ಕನ್ಯೆ. ಬೆಳ್ಳಗೆ ತೆಳ್ಳಗೆ ಇದ್ದಾಳೆ. ಹೊಸಕಾಲದ ಸಿಲ್ಕಿನಸೀರೆ, ಅದಕ್ಕೆ ಒಪ್ಪುವ ಕುಪ್ಪುಸ. ಕಿವಿಗೆ ಇಳಿ ಬಿದ್ದ ಲೋಲಕು. ಓರೆ ಬೈತಲೆ ತೆಗೆದಿದ್ದಾಳೆ. ಒಳ್ಳೆ ರೂಪವತಿ. ಶಾಮರಾಯರು ಸುಮಾರು ೪೦ ವರುಷದ ಕೆಂಪಗೆ ತೆಳ್ಳಗಿರುವ ಆಳು. ಅವರೂ ರೂಪವಂತರೇ. ಅವರು ಒಳಕ್ಕೆ ಬರು ತ್ತಲೇ ರಾಮು ಎದ್ದು ನಿಲ್ಲುವನು. ಶಾಮರಾಯರು ಒಳಗೆ ಬಂದವರೇ ಅವನಕಡೆ ಒಂದು ತೀಕ್ಷ್ಣವಾದ ನೋಟವನ್ನು ಬೀರುವರು]

**ಭಾವ :**-- ಬನ್ನಿ ಕೂತುಕೊಳ್ಳಿ.

[ಶಾಮರಾಯರು ಒಂದು ಕುರ್ಚಿಯ ಮೇಲೆ ಕೂಡುವರು. ರತ್ನ ಅಲ್ಲೇ ಹಾಸಿದ್ದ ಜಮಖಾನೆಯ ಮೇಲೆ ಓರಣವಾಗಿ ಕೂಡುವಳು. ಕ್ಷಣಹೊತ್ತು ರಾಮು ನಟ್ಟ ದೃಷ್ಟಿಯಿಂದ ರತ್ನಳನ್ನು ನೋಡುವನು ರತ್ನಳೂ ಸಹ ಅವನನ್ನೇ ದೃಷ್ಟಿಸಿ ನೋಡುವಳು. ಕ್ಷಣಹೊತ್ತು ನೀರವ]

**ಪುರೋಹಿತ :**— (ಶಾಮರಾಯರು ತಮ್ಮ ಕಡೆ ನೋಡಲು) ಇನ್ನು ನಾವು ಬರೋಣವೆ?

**ಭಾವ :**— (ರಾಮು ಕಡೆ ನೋಡಿ ಅವನು 'ಹೂ' ಎಂದು ಸನ್ನೆ ಮಾಡಲು) ಹೂ, ಆಗಬಹುದು.

[ರತ್ನ, ಶಾಮರಾಯರು—ಇಬ್ಬರೂ ಎದ್ದು ಗಂಭೀರವಾಗಿ ಹೊರಟು ಹೋಗುವರು. ಪುರೋಹಿತನೂ ಅವರೊಡನೆಯೇ ಹೋಗುವನು.)

ಕ್ಷಣಹೊತ್ತು ನಿಶ್ಶಬ್ದ. ಭಾವ, ಅವರೆಲ್ಲಾ ಹೊರಟುಹೋದರೋ ಇಲ್ಲವೋ ಎಂದು ಹೊರಗೆ ಒಂದು ಸಲ ಬಗ್ಗಿ ನೋಡಿ, ಅವರೆಲ್ಲಾ ಹೊರಟುಹೋಗಿರುವುದನ್ನು ನೋಡಿ ನಗುವನು]

**ಭಾವ** :— (ನಗುತ್ತಾ) ಏನಂತೀಯೋ ರಾಮೂ ? ಒಪ್ಪಿದ್ದೀಯೋನೋ ?

**ರಾಮು** :— (ನಗುವನು)

**ಭಾವ** :— ಏಕೆ ಒಪ್ಪೀಯೆ ಪಾಪ! ಅಂಥಾ ಹುಡುಗೀ ಕೈ ಹಿಡಿಯೋಕೆ ಪುಣ್ಯಾ ಮಾಡಿರಬೇಕು. ಏನಂತಿ ?

**ರಾಮು** :— ಒಪ್ಪಿದೆ ನೋಡು ಭಾವಾ. ಆದರೆ... ....

**ಭಾವ** :— ಏನೋ ತಿರುಗೀರೇ—ಂತ ರಾಗಾ ?

**ರಾಮು** :— ಏನೂ ಇಲ್ಲಾನ್ನು. ಹುಡುಗೀನ್ನ ನೋಡಬೇಕು ಅಂತ ಹಟ ಹಿಡಿಯಬಾರದಾಗಿತ್ತು ಅಂತ ಪುನಃ ಅನಿಸುತ್ತಾ ಇದೆ.

**ಭಾವ** :— ಹುಡುಗರೇ ಹಾಗೆ. ಮೊದಲು ತಾವು ಹಿಡಿದದ್ದೇ ಹಟ. ಆ ಮೇಲೆ ಪಶ್ಚಾತ್ತಾಪ, ಹೂ. ಏನೋ ಆಗಿ ಹೋಯಿತಲ್ಲಾ ಬಿಡು.

**ರಾಮು** :— ( ಹಾಗೇ ಯೋಚಿಸುತ್ತಾ ) ಅಲ್ಲಾ. ಆ ಹುಡುಗಿ ಮುಖ ನೋಡಿದೆಯಾ ಭಾವಾ ?

**ಭಾವ**:— ಏಕೆ ? ನೋಡಿದೆ.

**ರಾಮು** :— ಆ ಮುಖದಲ್ಲಿ ಏನು ಕಾಣಿಸುತ್ತಾ ಇತ್ತು ಹೇಳು ?

**ಭಾವ** :— ಸೌಂದರ್ಯ.

**ರಾಮು** :— ಅದು ಸರಿ. ಜೊತೆಗೆ ?

**ಭಾವ** :— ಇನ್ನೇನು ?

**ರಾಮು** :— ಅಸಮಾಧಾನ.

**ಭಾವ** — ಅಲ್ಲ. ನಾಚಿಕೆ.

**ರಾಮು** :— ಅಲ್ಲ, ಅಸಮಾಧಾನ.

**ಭಾವ** :— ಏಕೋ ಅಸಮಾಧಾನ ?

**ರಾಮು**:— ನಾವು ಕರೆಸಿ ನೋಡಿದ್ದಕ್ಕೆ.

**ಭಾವ** :— ಈಗಿಂದ ಇಷ್ಟು ಹೆದರಿಕೆ ಏನೋ ? **ಹೆಂಡತಿ ಅಂದ್ರೆ** ?

**ಪುರೋಹಿತ :**— ಒಂದು ಚಮತ್ಕಾರ ನಡೆಯಿತು ನೋಡು ಮಗು.

**ರಾಮು :**— ಚಮತ್ಕಾರ.

**ಪುರೋಹಿತ :**— ಹೂ.

**ಭಾವ :**— ಏನದು ಹೇಳಿ.

**ಪುರೋಹಿತ :**— ನೋಡಿ ಮೊದಲು ಇಲ್ಲಿ ನಡೆದ ವಿಷಯಾನೆಲ್ಲಾ ಶಾಮರಾಯರ ಮುಂದೆ ಹೇಳಿದೆ. ಅವರಿಗೆ ರೇಗಿ ಹೋಯಿತು. ನಾನೆಷ್ಟೋ ಹೇಳಿದೆ. ಆದರೂ ಉಪಯೋಗವಾಗಲಿಲ್ಲ. ಮದುವೆ ನಿಂತು ಹೋಗೋ ಪ್ರಸ್ತಾಪಾನೂ ಬಂತು ಕಡೆಗೂ ಅವರೇನೋ 'ಪುರೋಹಿತರೆ! ಇಂಥ ಸಮಯದಲ್ಲಿ ನನ್ನನ್ನು ಅವಮಾನ ಪಡಿಸುವ ವರ ಸಂಬಂಧ ಬೇಡಲೇಬೇಡ, ನಾನು ಹುಡುಗಿನ್ನ ಕರೆತರುವುದಿಲ್ಲಾ ಅಂತ ಹೇಳಿಬಿಡಿ, ಅಂದುಬಿಟ್ಟರು. ಇತರರೂ ಅವರ ಮಾತನ್ನೆ ಅನುಮೋದಿಸಿದರು.

**ಭಾವ :**— ಎಲ್ಲರಿಗೂ ಗೊತ್ತಾಗಿ ಹೋಯ್ತು ?

**ಪುರೋಹಿತ :**— ಮೊದಲು ನಾನೇನೋ ಶಾಮರಾಯರೊಬ್ಬರಿಗೇ ಹೇಳಿದೆ. ಅವರು ರೇಗಾಡಿದರು. ಅದು ಅವರ ಬಂಧು-ಬಳಗಗಳ ಕಿವೀಗೆ ಬಿತ್ತು. ಎಲ್ಲರೂ 'ಇದೇನು ಶುದ್ಧ ಅವಮಾನ' ಅಂತ ಕೂಗಾಡಿದರು.

**ಭಾವ :**— ಆ ಮೇಲೆ ?

**ಪುರೋಹಿತ :**— ಆಗಲೇ ನೋಡಿ ಒಂದು ಚಮತ್ಕಾರ ನಡೆದದ್ದು.

**ರಾಮು :**— ಏನದು (ಕುತೂಹಲದಿಂದ) ಏನದು ?

**ಪುರೋಹಿತ :**— ಅವರ ಮಗು ...

**ರಾಮು :**— ಯಾರು ?

**ಪುರೋಹಿತ :**— ಮದುವೆ ಹುಡುಗಿ, ರತ್ನ....

**ರಾಮು :**— (ಉತ್ಸಾಹದಿಂದ) ಹೂ ಏನು ?

**ಪುರೋಹಿತ :**— ರತ್ನ.... ಎಷ್ಟು ಬುದ್ಧಿವಂತಳು ಅಂತೀರಿ.

**ರಾಮು :**— ಹೂ.

**ಪುರೋಹಿತ :**— ತಂದೆ ಹತ್ರ ಬಂದು ಕೂತುಕೊಂಡಳು. 'ಅಪ್ಪಾ! ನೀನೇನೂ ಅಂದುಕೊಳ್ಳದೇ ಇದ್ರೆ ನಾನೊಂದು ಮಾತು ಹೇಳ್ತೀನೆ, ಅಂದ್ಲು.

**ರಾಮು** :— ಹೂ.

**ಪುರೋಹಿತ** :— ಎಲ್ಲರೂ ಅವರ ಕಡೇನೇ ನೋಡಿದರು. ಶಾಮರಾಯರು ಮಗಳನ್ನು ಹತ್ತಿರಕ್ಕೆ ಕರೆದು ' ಹೇಳು ಮಗು, ನನ್ನ ಹತ್ರ ಯಾಕಮ್ಮಾ ಸಂಕೋಚ ನಿಂಗೆ ' ಅಂದ್ರು. ಆಗ ರತ್ನಾ ನಾಚುತ್ತಾ ನಾಚುತ್ತಾ ನೋಡಪ್ಪಾ, ಅವರನ್ನು ಹಿಂದಕ್ಕೆ ಕಳಿಸೋದ್ರಿಂದ ಅವರಿಗಿಂತ ನಮಗೇ ಹೆಚ್ಚು ನಷ್ಟ ಅಂತೇನೆ, ಅಂದ್ಳು. ಶಾಮರಾಯರು ಏಕೆ ಮಗು, ಒಂದು ಸಾವಿರ ರೂಪಾಯಿ ನಷ್ಟ ಆದೀತೆ. ಅದರ ವಿಷಯ ನೀನೇನೂ ಯೋಚಿಸ್ಬೇಡ. ಸರಿಯಾದ ಗೌರವಸ್ಥರ ಮನೇಗೆ ನಿನ್ನ ಸೇರಿಸೋದಕ್ಕೆ ಇನ್ನೆರಡು ಸಾವಿರ ಖರ್ಚಾದರೂ ಚಿಂತೆಯಿಲ್ಲ. ಅಂದರು. ರತ್ನ ' ರೂಪಾಯಿ ನಷ್ಟ ಅಲ್ಲಪ್ಪಾ ನಿನ್ನ ಮಗಳು ನಾಲ್ಕು ಜನ ನೋಡುವಷ್ಟೂ ಲಕ್ಷಣವಾಗಿಲ್ಲ ಅಂತ ಅವರು ಸುದ್ದಿ ಹಬ್ಬಿಸಿದರೆ ' ಅಂದ್ಳು.

**ಭಾವ** :— ( ಆಶ್ಚರ್ಯದಿಂದ ) ಆ ! ಹಾಗಂದಳೆ ! ( ರಾಮೂಗೆ ) ಭಲಾರೆ ಹುಡುಗಿ ಕಣೋ ರಾಮು. ಅವಳಿಗೂ ಒಂದು ಸಲ ಗಂಡನ್ನ ನೋಡೋಣ ಅನಿಸಿರಬೇಕು, ಏನಂತಿ ?

**ರಾಮು** :— ಅನಿಸಿರಬಹುದು.

**ಭಾವ** :— ವಯಸ್ಸಿಗೆ ಬಂದ ಹುಡುಗಿ, ವಿದ್ಯಾವಂತೆ. ಅವಳಿಗೂ ಕುತೂಹಲ ಆಸೆ, ನ್ಯಾಯವೇ. ಆದರೂ ಒಳ್ಳೆ ಬುದ್ಧಿವಂತಳು ಕಣೋ, ನಾನೇನೋಂತಿದ್ದೆ.

**ರಾಮು** :— ನಿಜ.

**ಭಾವ** :— ಆ ಮೇಲೆ ?

**ಪುರೋಹಿತ** :— ಆ ಮಾತು ಅವರ ಮನಸ್ಸಿಗೆ ನಾಟಿತು ನೋಡಿ. ಆದರೂ ಅವರಿಗೆ ಇನ್ನೂ ಸಮಾಧಾನ ಆಗಲಿಲ್ಲ. ಆಗ, ಮಗಳ ಮಾತನ್ನು ಉತ್ಸಾಹದಿಂದ ಕೇಳುತ್ತಿದ್ದ ಅವಳ ತಾಯಿ, ಗಂಡನ ಕಿವೀಲಿ ' ಮಗು ಇಷ್ಟು ಇಷ್ಟ ಪಟ್ಟೆರೋ ಸಂಬಂಧಾನ್ನ ಮಾನಮರ್‍ಯಾದೆ ಅಂತ ಏನೋ ಕುಂಟು ನೆಪ ತೆಗೆದ್ಬು ಮುರೀಬೇಡಿಛಿದ್ರೆ—ಹೋಗಲಿ, ತೋರಿಸಿಕೊಂಡು ಬಂದುಬಿಡೋಣ ' ಅಂದ್ರು.

**ಭಾವ :—** ಸರಿ. ಆ ಮೇಲೆ?

**ಪುರೋಹಿತ :—** ಆ ಮೇಲೇನು, ಹೊರಟಿದ್ದೇ.... ಆದರೆ ಒಂದು ಮಾತು.

**ಭಾವ :—** ಏನು?

**ಪುರೋಹಿತ :—** ಅಲ್ಲೇ ಇನ್ನೊಂದು ಮಾತೂ ಹೇಳಿದ್ದಾರೆ. ಈಗ ಹುಡುಗಿ ಅವರ ತಂದೆ ಶಾಮರಾಯರು ಇಬ್ಬರೇ ಬರ್ತಾರೆ. ಒಂದು ನಿಮಿಷ ಹಾಗೆ ಕೂತಿದ್ದು ಹೊರಟುಹೋಗ್ತಾರೆ. ವೃಥಾ ಮಾತುಕಥೆ ಆಡಬೇಡಿ, ಅವರಿಗೆ ರೇಗಿದೆ.

**ಭಾವ :—** ಆಗಲಿ. ಅಷ್ಟೇ ಸಾಕು. ಒಂದು ನಿಮಿಷ ಹಾಗೆ ಬಂದು ಕೂತು ಹೊರಟು ಹೋಗಲಿ. ಏನೋ ಹುಡುಗುತನ ಆಸೆ. ಯಾವಾಗ ಬರ್ತಾರೆ?

**ಪುರೋಹಿತ :—** ಆಗೋ! ಬಂದೇ ಬಂದ್ರಲ್ಲಾ.

[ ಶಾಮರಾಯರು ರತ್ನಾ ಬರುವರು. ರತ್ನ ಸುಮಾರು ೧೫-೧೬ ವರ್ಷದ ಸುಂದರ ಕನ್ಯೆ. ಬೆಳ್ಳಗೆ ತೆಳ್ಳಗೆ ಇದ್ದಾಳೆ. ಹೊಸಕಾಲದ ಸಿಲ್ಕಿನಸೀರೆ, ಅದಕ್ಕೆ ಒಪ್ಪುವ ಕುಪ್ಪಸ. ಕಿವಿಗೆ ಇಳಿಬಿದ್ದ ಲೋಲಕು. ಓರೆ ಬೈತಲೆ ತೆಗೆದಿದ್ದಾಳೆ. ಒಳ್ಳೆ ರೂಪವತಿ. ಶಾಮರಾಯರು ಸುಮಾರು ೪೦ ವರುಷದ ಕೆಂಪಗೆ ತೆಳ್ಳಗಿರುವ ಆಳು. ಅವರೂ ರೂಪವಂತರೇ. ಅವರು ಒಳಕ್ಕೆ ಬರು ತ್ತಲೇ ರಾಮು ಎದ್ದು ನಿಲ್ಲುವನು. ಶಾಮರಾಯರು ಒಳಗೆ ಬಂದವರೇ ಅವನಕಡೆ ಒಂದು ತೀಕ್ಷ್ಣವಾದ ನೋಟವನ್ನು ಬೀರುವರು ]

**ಭಾವ :—** ಬನ್ನಿ ಕೂತುಕೊಳ್ಳಿ.

[ ಶಾಮರಾಯರು ಒಂದು ಕುರ್ಚಿಯ ಮೇಲೆ ಕೂಡುವರು. ರತ್ನ ಅಲ್ಲೇ ಹಾಸಿದ್ದ ಜಮಖಾನೆಯ ಮೇಲೆ ಓರಣವಾಗಿ ಕೂಡುವಳು. ಕ್ಷಣಹೊತ್ತು ರಾಮು ನಟ್ಟ ದೃಷ್ಟಿಯಿಂದ ರತ್ನಳನ್ನು ನೋಡುವನು ರತ್ನಳೂ ಸಹ ಅವನನ್ನೇ ದೃಷ್ಟಿಸಿ ನೋಡುವಳು. ಕ್ಷಣಹೊತ್ತು ನೀರವ]

**ಪುರೋಹಿತ :—** (ಶಾಮರಾಯರು ತಮ್ಮ ಕಡೆ ನೋಡಲು) ಇನ್ನು ನಾವು ಬರೋಣವೆ?

**ಭಾವ :—** ( ರಾಮು ಕಡೆ ನೋಡಿ ಅವನು 'ಹೂ' ಎಂದು ಸನ್ನೆ ಮಾಡಲು) ಹೂ, ಆಗಬಹುದು.

[ ರತ್ನ, ಶಾಮರಾಯರು—ಇಬ್ಬರೂ ಎದ್ದು ಗಂಭೀರವಾಗಿ ಹೊರಟು ಹೋಗುವರು. ಪುರೋಹಿತನೂ ಅವರೊಡನೆಯೇ ಹೋಗುವನು. )

ಕ್ಷಣಹೊತ್ತು ನಿಶ್ಶಬ್ದ. ಭಾವ, ಅವರೆಲ್ಲಾ ಹೊರಟುಹೋದರೋ ಇಲ್ಲವೋ ಎಂದು ಹೊರಗೆ ಒಂದು ಸಲ ಬಗ್ಗಿ ನೋಡಿ, ಅವರೆಲ್ಲಾ ಹೊರಟುಹೋಗಿರುವುದನ್ನು ನೋಡಿ ನಗುವನು]

**ಭಾವ** :— (ನಗುತ್ತಾ) ಏನಂತೀಯೋ ರಾಮೂ ? ಒಪ್ಪಿದ್ದೀಯೇನೋ ?

**ರಾಮು** :— (ನಗುವನು)

**ಭಾವ** :— ಏಕೆ ಒಪ್ಪೀಯೆ ಪಾಪ! ಅಂಥಾ ಹುಡುಗೀ ಕೈ ಹಿಡಿಯೋಕೆ ಪುಣ್ಯಾ ಮಾಡಿರಬೇಕು. ಏನಂತಿ ?

**ರಾಮು** :— ಒಪ್ಪಿದೆ ನೋಡು ಭಾವಾ. ಆದರೆ... ....

**ಭಾವ** :— ಏನೋ ತಿರುಗೀರೇ—ಂತ ರಾಗಾ ?

**ರಾಮು** :— ಏನೂ ಇಲ್ಲಾನ್ನು. ಹುಡುಗೀನ್ನ ನೋಡಬೇಕು ಅಂತ ಹಟ ಹಿಡಿಯಬಾರದಾಗಿತ್ತು ಅಂತ ಪುನಃ ಅನಿಸುತ್ತಾ ಇದೆ.

**ಭಾವ** :— ಹುಡುಗರೇ ಹಾಗೆ. ಮೊದಲು ತಾವು ಹಿಡಿದದ್ದೇ ಹಟ. ಆ ಮೇಲೆ ಪಶ್ಚಾತ್ತಾಪ, ಹೂ. ಏನೋ ಆಗಿ ಹೋಯಿತಲ್ಲಾ ಬಿಡು.

**ರಾಮು** :— ( ಹಾಗೇ ಯೋಚಿಸುತ್ತಾ ) ಅಲ್ಲಾ. ಆ ಹುಡುಗಿ ಮುಖ ನೋಡಿದೆಯಾ ಭಾವಾ ?

**ಭಾವ**:— ಏಕೆ ? ನೋಡಿದೆ.

**ರಾಮು** :— ಆ ಮುಖದಲ್ಲಿ ಏನು ಕಾಣಿಸುತ್ತಾ ಇತ್ತು ಹೇಳು ?

**ಭಾವ** :— ಸೌಂದರ್ಯ.

**ರಾಮು** :— ಅದು ಸರಿ. ಜೊತೆಗೆ ?

**ಭಾವ** :— ಇನ್ನೇನು ?

**ರಾಮು** :— ಅಸಮಾಧಾನ.

**ಭಾವ** — ಅಲ್ಲ. ನಾಚಿಕೆ.

**ರಾಮು** :— ಅಲ್ಲ, ಅಸಮಾಧಾನ.

**ಭಾವ** :— ಏಕೋ ಅಸಮಾಧಾನ ?

**ರಾಮು** :— ನಾವು ಕರೆಸಿ ನೋಡಿದ್ದಕ್ಕೆ.

**ಭಾವ** :— ಈಗಿಂದ ಇಷ್ಟು ಹೆದರಿಕೆ ಏನೋ ? **ಹೆಂಡತಿ ಅಂದ್ರೆ** ?

**ರಾಮು** :— ಹೆದರಿಕೆ ಅಲ್ಲ ಭಾವಾ, ನಾಳೆ ಅವಳೂ ನಾನೂ ಬದುಕಿರೋ ತನಕಾ ಹಂಗಿಸದೆ ಇರುತ್ತಾಳೆಯೆ ?

**ಭಾವ** :— ಹಂಗಿಸಿದರೆ ಹಂಗಿಸಲಿ. ಅದೂ ಒಂದು ಸಂತೋಷ.

**ರಾಮು** :— ಅದು ಸರಿ ಅನ್ನು................ಇನ್ನೂ ಈ ಪುರೋಹಿತ ಏಕೆ ಬರಲಿಲ್ಲ ಅಂತೇನೆ.

**ಭಾವ** :— ಓಹೋ ! ವರಪೂಜೇಗೆ ಬಹಳ ಆತುರವಾಗಿದ್ದಿ ಅಂತ ತೋರುತ್ತೆ.

**ರಾಮು** :— (ನಗುತ್ತಾ) ಹೂ ! ಆಗೋದೆಲ್ಲಾ ಆಗಿಹೋಗಲಿ ಬೇಗ.

**ಭಾವ** :— (ಸ್ವಲ್ಪ ಹಾಸ್ಯವಾಗಿ) ಎಷ್ಟು ಬೇಗ ಕೈಹಿಡಿದೇನು ಅಂತಿದ್ದೀ ಅಲ್ಲವೇ ?

**ರಾಮು** :— (ಸಡಗರದಿಂದ) ನಿಜವಾಗು. ನೀನೇನಂತಿ ಭಾವಾ. ಹುಡುಗಿ ಅಷ್ಟು ಉತ್ಸಾಹಕ್ಕೆ ತಕ್ಕವಳಾಗಿದ್ದಾಳೆ ಅಂತೀಯೋ ಇಲ್ವೋ ?

**ಭಾವ** :— ನಿಜ, ತಕ್ಕವಳು. ಒಳ್ಳೆ ಸುಂದರಿ. ಬುದ್ಧಿ ಚುರುಕು. ನೋಟ ತೀಕ್ಷ್ಣ. ರೂಪ ಆಕರ್ಷಕ. ದುಂಡುಮುಖ ಅರಳಿದ ಕಣ್ಣು. ರಂಗಿನ ತುಟಿ...........

**ರಾಮು** :— (ನಡುವೇ ಬಾಯಿಹಾಕಿ) ಸಾಕು ಸಾಕು ಭಾವಾ ಸಾಕು ವರ್ಣನೇಗೆ ಹೊರಟರೆ ನೀನಾವ ಕವೀಗೆ ಕಡಮೆ ?

**ಭಾವ** :— ಹೂ, ನಡೆಯುಲಿ ! 'ಶುಭಸ್ಯ ಶೀಘ್ರಂ' ನಡೆಯುಲಿ.

**ತಂದೆ** :— (ಪ್ರವೇಶಿಸಿ) ಏನು ರಾಮೂ ! ಎಲ್ಲಾ ಮುಗೀತೋ ! ಹುಡುಗೀನ್ನ ನೋಡಿದ್ದಾಯಿತೋ ಇಲ್ವೋ ಎನಂತಿ ?

**ಭಾವ** :— ಏನಂತಾನೆ. ಇನ್ನೂ ಪುರೋಹಿತರು ಏಕೆ ಬರಲಿಲ್ಲ, ಅಂತಿದ್ದಾನೆ

**ತಂದೆ** :— ಹುಡುಗೀನ್ನ ಒಪ್ಪಿದಿ ತಾನೇಪ್ಪ ಹಾಗಾದರೆ.

**ರಾಮು** :— ಹೂ.

**ತಂದೆ** :— ಸರಿ. ಒಂದು ಗಂಡಾಂತರ ಕಳೀತು. ಮಾನ ಉಳೀತು. ಆದರೆ....

**ರಾಮು** :— ಏನು ?

**ತಂದೆ** :— ನಿಮ್ಮಾವ ಏನೂ ಕಡಿಮೆ ಆಸಾಮಿ ಅಲ್ಲಾ ಅಂತ ತೋರುತ್ತೆ. ನೀವು ಅವನಿಗೆ ಕೊಟ್ಟ ಕೆಲಸಕ್ಕೆ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳ ಬೇಕು ಅಂತ ಇರೋ ಹಾಗೆ ಕಾಣುತ್ತೆ.

**ರಾಮು** :—(ಚಮತ್ಕಿತನಾಗಿ) ಆ !

**ಭಾವ** :— ಏನಂತೆ ?

**ತಂದೆ** :— ಪುರೋಹಿತನ ಕೈಲಿ ಈಗೊಂದು ಮಾತು ಹೇಳಿ ಕಳಿಸಿದ್ದಾನೆ.

**ರಾಮು** :— ಏನು ?

**ಭಾವ** :— ಯಾವ ವಿಷಯ ?

**ತಂದೆ** :— ವರದಕ್ಷಿಣೆ ವಿಷಯ ?

**ಭಾವ** :— ಏನಂತೆ ? ಕಡಮೆ ಮಾಡಬೇಕು ಅಂತಿದ್ದಾರೋ ಏನು ?

**ತಂದೆ** :— ಕಡಮೇ. ಕಡಮೇ ಅಲ್ಲ. ಸೊನ್ನೇನೇ ಹಾಕೋ ಹಾಗಿದೆ ಅವರ ತಮ್ಮ ಹಣ ತರೋದಕ್ಕೆ ಹೋಗಿದ್ದನಂತೆ. ಆದರೆ ಏನೋ ಅನುಕೂಲ ಆಗಲಿಲ್ಲ ಅಂತ ಬಂದುಬಿಟ್ಟನಂತೆ. ಈಗ ವರಪೂಜೆ ಕಾಲಕ್ಕೆ ವರದಕ್ಷಿಣೆ ಹಣಾನ್ನ ಕೊಡೋದಕ್ಕೆ ಆಗೋದಿಲ್ಲ ಅಂತ ಹೇಳಿ ಕಳಿಸಿದ್ದಾರೆ. ಅವರಿಗೇನು ಮದುವೆ ಆಗಬೇಕು ಅಂತ ಮನಸ್ಸಿನಲ್ಲಿದೆಯೋ ಇಲ್ಲವೋ ಕಾಣೆ.

(ಸ್ವಲ್ಪ ಹೊತ್ತು ಎಲ್ಲರೂ ಯೋಚಿಸುವರು)

**ರಾಮು** :— ಮದುವೆ ನಿಲ್ಲಿಸಬೇಕು ಅನ್ನೋ ಯೋಚನೆ ಇಲ್ಲಾಪ್ಪ ಅವರಿಗೆ. ಅದು ನನಗೆ ಗೊತ್ತು.

**ತಂದೆ** :— ಅದು ಹೇಗೆ ಗೊತ್ತೋ ?

**ಭಾವ** :— ರಾಮೂ ಮಾತು ನಿಜ ಮಾವಾ, ಹುಡುಗನಿಗಿಂತ ಹುಡುಗಿ ಹೆಚ್ಚು ಆಸೆ ಪಟ್ಟಿದ್ದಾಳೆ ಈ ಮದುವೇಗೆ. ಹುಡುಗಿ ತಾಯಿಗೂ ತುಂಬ ಇಷ್ಟವಿದೆ. ತಂದೇನೂ ಹುಡುಗೀ ಇಷ್ಟಕ್ಕೆ ಸ್ವಲ್ಪವೂ ವಿರೋಧವಾಗಿ ಹೋಗೋನಲ್ಲ.

**ತಂದೆ** :— ಇಷ್ಟೆಲ್ಲಾ ನಿಮಗೆ ಹೇಗೆ ಗೊತ್ತು ಅಂತೇನೆ.

**ಭಾವ** :— ಹೇಗೋ ಅಂತು ಇದು ನಿಜ ಅಂದುಕೊಳ್ಳಿ. ಅವರಿಗೆಲ್ಲಾ ಅಷ್ಟು ಇಷ್ಟ ಇರೋದ್ರಿಂದ್ಲೇನೇ ಶಾಮರಾಯರು 'ಸಂಬಂಧ ತಪ್ಪಿಹೋದರೆ ಹೋಗಲಿ. ನಾನು ನನ್ನ ಮಗಳನ್ನ ಅವರಿಗೆ ತೋರಿಸೋದಕ್ಕೆ ಕರಕೊಂಡು ಹೋಗೋಲ್ಲಾ'—ಅಂತ ಹಟ ಹಿಡಿದಿದ್ದರೂ, ಎಲ್ಲರೂ ಬಲವಂತ ಮಾಡಿ ಅವರನ್ನಿಲ್ಲಿಗೆ ಕಳಿಸಿದ್ದು.

**ರಾಮು** :— ಇನ್ನು ಯಾವಾಗ ಕೊಡುತ್ತಾರಂತೆ?

**ತಂದೆ** :— ಯಾವಾಗಲೋ ಯಾಂಗ್ಗೊತ್ತು. ಈಗ ವರಪೂಜೇ ಕಾಲಕ್ಕಂತೂ ಇಲ್ಲಾಂತ ಹೇಳಿ ಕಳಿಸಿದ್ದಾರೆ.

**ರಾಮು** :— (ಸಹಾನುಭೂತಿಯಿಂದ) ನಿಜವಾಗಲೂ ಪಾಪ! ಅವರು ನೆನಿಸಿದ ಹಾಗೆ ಹೊತ್ತಿಗೆ ಸರಿಯಾಗಿ ಹಣ ಒದಗಲಿಲ್ಲವೋ ಏನೋ.

**ಭಾವ** :— ಇರಬೇಕಿರಬೇಕು, ಪಾಪ!

**ತಂದೆ** :— ಅದು ಸರಿ. ಆದರೆ ನನ್ನ ಗತಿ? ಈ ಖರ್ಚೂ ವೆಚ್ಚಾ ಎಲ್ಲಾ ಯಾರು ವಹಿಸಿಕೊಳ್ಳೋರು?

**ಭಾವ** :— ಅದರ ವಿಷಯ ಆ ಮೇಲೆ ನೋಡಿಕೊಳ್ಳೋಣ ಮಾವ. ಈಗ ಹೇಗಾದರೂ ಸರಿಪಡಿಸಿಕೊಳ್ಳೋಣ. ನನ್ನ ಹತ್ರಲೂ ಸ್ವಲ್ಪ ದುಡ್ಡಿದೆ. ಅಲ್ಲದೆ ನಾಳೆ ನಾಡಿದ್ದರಲ್ಲಿ, ಮದುವೆ ಮುಗಿಯೋದ್ರೊಳಗಾಗಿ ಅವರ ಹಣಬಂದು ವರದಕ್ಷಿಣೆ ಕೊಟ್ಟರೂ ಕೊಡಬಹುದು ಹಾಗೆ ಕೊಡಲಿಲ್ಲ ಅನ್ನಿ. ಏನು ಇಲ್ಲಿಗೇ ಮುಗಿದು ಹೋಯಿತೇ? ಗಂಡಿನ ಕಡೆಯೋರಲ್ವೆ ನಾವು? ಅದನ್ನ ತರಿಸೋಣ. ಏನಂತಿ ರಾಮು?

**ರಾಮು** :— (ಮೆಚ್ಚಿಕೆಯಿಂದ ಭಾವನ ಕಡೆನೋಡಿ ಕಿರುನಗೆಯಿಂದ) ಆಗ ಬಹುದು.

**ತಂದೆ** :— ಹಾಗಾದರೆ ಹಾಗೇ ಹೇಳಿ ಕಳಿಸಲೇನು?

**ರಾಮು** :—<br>**ಭಾವ** :— } ಹೂ.

(ಆ ಹೊತ್ತಿಗೆ ಪುರೋಹಿತ ಸಪ್ಪೆ ಮೋರೆ ಹಾಕಿಕೊಂಡು ಬರುವನು)

**ತಂದೆ** :— (ಅವಸರದಿಂದ) ಬನ್ನಿ ಬನ್ನಿ ಪುರೋಹಿತರೆ. ಏನೂ ಘಾಬರಿಯಾಗಬೇಡಿ. ಎಲ್ಲಾ ಸರಿಹೋಗುತ್ತೆ.

***ಪುರೋಹಿತ** :— (ನಿಧಾನವಾಗಿ) ಏನು ಏನು ಸರಿಹೋಗುತ್ತೆ?

**ತಂದೆ** :— ಎಲ್ಲಾ ಸರಿಹೋಗುತ್ತೆ ಬನ್ನಿ.

**ಭಾವ** :— ಹುಡುಗ ನಾವು ಎಲ್ಲಾ ಒಪ್ಪಿದ್ದೇವೆ. ಅವರು ಅನುಕೂಲವಾದಾಗ ಸಾಧ್ಯವಾದಷ್ಟು ಬೇಗನೆ ನಾಳೆ ನಾಡಿದ್ದು ವರದಕ್ಷಿಣೆ ಹಣ ತಲುಪಿಸಲಿ. ಈಗ ಮದುವೆ ನಡೆದು ಹೋಗಲಿ.

**ಪುರೋಹಿತ:—** (ಶಾಮು ಕಡೆ ನೋಡಿ ನಗುತ್ತಾ) ಹುಡುಗೀ ನಿಮಗೆ ಅಷ್ಟು ಮೆಚ್ಚುಕೆಯಾಗಿದೆ ಅನ್ನಿ.

**ಭಾವ:—** ಮೆಚ್ಚಿಕೇನೋ ಅಲ್ಲೋ ಅಂತೂ ಒಪ್ಪಿಕೊಂಡಿದ್ದೇವೆ. ಈ ಹೊತ್ತಿನಲ್ಲಿ ಸುಮ್ಮನೆ ಆಭಾಸವಾಗಬಾರದು ಅಂತ.

**ಪುರೋಹಿತ:—** ಅದು ಸರಿ. ಆದರೆ ಶಾಮುರಾಯರಿಗೆ ಹಣಕ್ಕೇನು ಕೊರತೆ. ಎಲ್ಲಾ ಜೊತೆ ಮಾಡಿಕೊಂಡಿದ್ದಾರೆ.

**ತಂದೆ:—** ಹೂ! ಹಾಗೇನು?

**ಪುರೋಹಿತ:—** ವರದಕ್ಷಿಣೆ ಈಗ ಇಲ್ಲಾಂದ್ರೆ ನೀವೇನುತ್ರ ಕೊಡ್ತೀರೋ: ಮದುವೆ ಆಗಲಿ ಅಂತೀರೋ ಬೇಡ ಅಂತೀರೋ ನೋಡೋಣ ಅಂತ ಹಾಗಂದಿರಬಹುದು.

**ರಾಮು:—** (ವ್ಯಂಗ್ಯವಾಗಿ) ಹುಡುಗಿ ನಮಗೆ ಎಷ್ಟು ಒಪ್ಪಿಗೆಯಾಗಿದೆ ಅನ್ನೋದನ್ನ ತೂಕಮಾಡಿ ತಿಳಕೊಳ್ಳೋಣ ಅಂತ ಹಾಗೆ ಹೇಳಿ ಕಳಿಸಿದರೇನೋ.

**ಭಾವ:—** ನಾನು ಹೇಳಲಿಲ್ಲವೆ ಮಾವ ವರದಕ್ಷಿಣೆ ಹಣ ಬರದೆ ಎಲ್ಲೂ ಹೋಗೋಲ್ಲ ಅಂತ.

**ತಂದೆ:—** ಅದು ಸರಿ. ಆದರೆ ಅದೇಕೆ ಹಾಗೆ ಹೇಳಿಕಳಿಸಿದರು ಅಂತ ಯೋಚನೆ.

**ಪುರೋಹಿತ:—** ಇನ್ನೇನೋ ಬೇರೆ ವಿಷಯ ಇರಬೇಕು ಅಂತ ತೋರುತ್ತೆ.

**ತಂದೆ:—** ಇರಬಹುದು. (ಕಳವಳದಿಂದ) ಏನಿರಬಹುದು?

**ಪುರೋಹಿತ:—** ಅದೇನೋ ಇಗೋ ಶಾಮುರಾಯರೇ ಬರ್ತಿದ್ದಾರಲ್ಲಾ.

**ತಂದೆ:—** ಬನ್ನಿ. ಕೂತುಕೊಳ್ಳಿ.

**ಶಾಮುರಾಯರು:—** (ನಿಂತುಕೊಂಡೇ) ಪರವಾಯಿಲ್ಲ.

**ತಂದೆ:—** ಏನು ಸಮಾಚಾರ? ಏನೋ ಸ್ವಲ್ಪ ಅಸಮಾಧಾನ ಪಟ್ಟು ಕೊಂಡ ಹಾಗಿದೆಯಲ್ಲಾ.

**ಶಾಮುರಾಯರು:—** (ಧ್ವನಿ ನಡುಗುತ್ತಾ) ಹೂ....ಹೂ....ಸ್ವಲ್ಪ ಹ.... ಹಾಗೇ ಇದೆ.

**ತಂದೆ** :— ನೀವೇನೂ ವರದಕ್ಷಿಣೆ, ವಿಷಯಕ್ಕೆ ಅಸಮಾಧಾನ ಪಟ್ಟುಕೊಳ್ಳ ಬೇಡಿ. ಇವತ್ತಿಲ್ಲದಿದ್ದರೆ ನಾಳೆ ಕೊಡಿ. ನಾನದನ್ನೆಲ್ಲಾ ಒಪ್ಪಿಸಿ ಸಮಾಧಾನ ಮಾಡಿದ್ದೇನೆ.

**ಶಾಮರಾಯರು** :— ಅದು ಸರಿ. ತಮ್ಮ ಹುಡುಗ ನಮ್ಮ ಹುಡುಗೀನ್ನ ಒಪ್ಪಿದ ಅಂತ ತೋರುತ್ತೆ.

**ತಂದೆ** :— ಹೂ. ಹೂ. ಅವನೇನು ಒಪ್ಪಿದ್ದಾನೇ ಅಂದ್ರೆ.

**ಶಾಮರಾಯರು** :— ಆದರೆ...........

**ತಂದೆ** :— ಏಕೆ? ಏನನುಮಾನ?

**ಶಾಮರಾಯರು** :— ತಮ್ಮ ಹುಡುಗ ಒಪ್ಪಿದ್ದೇನೋ ಸಂತೋಷ. ಆದರೆ ಈ ಸಮಯದಲ್ಲಿ ಅವರು ಹುಡುಗಿನ್ನ ನೋಡಬೇಕು ಅಂದದ್ದು ಸರಿಹೋಗಲಿಲ್ಲ. ನಮ್ಮನೇಲಿ ಒಂದು ದೊಡ್ಡ ರಗಳೇನೇ ಆಗಿ ಬಿಟ್ಟಿದೆ.

**ಭಾವ** :— ಅಯ್ಯೋ! ಅದೇನು ಬಿಡಿ. ಈಗಿನ ಕಾಲದ ಹುಡುಗರು. ಏನೋ ಆಸೆ ಏನೋ ಕುತೂಹಲ. ಆಗ್ಹೋಯ್ತಲ್ಲ. ಬಿಟ್ಟುಬಿಡಿ ಆ ಮಾತು.

**ಶಾಮರಾಯ** :— ಅದು ಸರಿ. ಆದರೆ ಆದರ ಪರಿಣಾಮ ನಿಮಗೆ ಗೊತ್ತಾಗ ಲಿಲ್ಲವಲ್ಲಾ.

**ತಂದೆ** :— ಏನು?

**ಶಾಮರಾಯ** :— ನೋಡಿ, ಹೇಳೋದಕ್ಕೆ ತುಂಬಾ ಸಂಕೋಚವಾಗುತ್ತೆ.

**ತಂದೆ** :— ಹೇಳಿಬಿಡಿ.

**ಶಾಮರಾಯ** :— ನೋಡಿ ರತ್ನಾ ನನಗೊಬ್ಬಳೇ ಮಗಳು. ಅವಳೂ ಬುದ್ಧಿ ತಿಳದೋಳು.

**ತಂದೆ** :— ಸರಿ ಗೊತ್ತು.

**ಶಾಮರಾಯ** :— ಅವಳ ಇಷ್ಟಕ್ಕೆ ವಿರೋಧವಾಗಿ ಹೋಗೋದಕ್ಕೆ ನಮಗೆ ಇಷ್ಟವಿಲ್ಲ.

**ಭಾವ** :— ವಿರೋಧವಾಗಿ?

**ಶಾಮರಾಯ** :— ನೋಡಿ. ನಿಮ್ಮ ಹುಡುಗ ನಮ್ಮ ರತ್ನಾನ್ನ ನೋಡಿದ ಹಾಗೇ, ರತ್ನಾನೂ ಹುಡುಗನ್ನ ನೋಡಿದಳು.

**ತಂದೆ:—** ಸರಿ.

**ಶಾಮರಾಯ:—** ಹುಡುಗ ಹುಡುಗೀನ್ನ ಒಪ್ಪಿದರೂ, ನಮ್ಮ ರತ್ನ ಹುಡುಗನ್ನ ಒಪ್ಪಲಿಲ್ಲ.

**ತಂದೆ:—** (ಆಶ್ಚರ್ಯದಿಂದ) ಆ! ಏನು! ಏನಂದ್ರಿ?

**ಬಾವ:—** ಹುಡುಗಿ........ಹುಡುಗನ್ನ ಒಪ್ಪಲಿಲ್ಲವೆ? ಇದೇನು ವಿಚಿತ್ರ?

**ತಂದೆ:—** ನಮ್ಮ ರಾಮೂನ್ನ ಒಪ್ಪಲಿಲ್ಲವೆ? ಹುಡುಗಿ....ಹುಡುಗಿ ಒಪ್ಪಲಿಲ್ಲವೆ? (ವಿಕಟವಾಗಿ ನಗುವರು) ಹೂ....ಹೂ....ಹೂ........

**ಶಾಮರಾಯ:—** ನೋಡಿ. ತಾವು ಹಿರೇರು ಕ್ಷಮಿಸಬೇಕು. ರತ್ನಾಗೆ ವರ ಒಪ್ಪಿಗೆಯಾಗಲಿಲ್ಲ ನಾವೆಲ್ಲ ಬಹಳ ಉತ್ಸಾಹದಿಂದಿದ್ದೆವು. ಅವಳಿಗೂ ಎಷ್ಟೋ ಬುದ್ಧೀ ಮಾತು ಹೇಳಿದೆವು. ಆದರೆ ಉಪಯೋಗವಾಗಲಿಲ್ಲ. ಅವಳೂ ಬುದ್ಧಿ ತಿಳಿದವಳು. ಅವಳು ಇಷ್ಟಪಡದೆ ಇರೋ ಕೆಲಸಾನ್ನ ನಾವು ಮಾಡೋದು ಚೆನ್ನಾಗಿಲ್ಲ. ಸಂತೋಷವಾಗಿ ನಾಲ್ಕು ದಿನ ಬಾಳೋರು ಅವರು. ನಾವೇನು ಸ್ವಲ್ಪ ದಿನದೋರು. ನಮ್ಮ ಕಾಲಾ ಮುಗೀತಾ ಬಂತು. ಮುಖ್ಯ ಋಣಾನುಬಂಧವಿಲ್ಲ. ಕ್ಷಮಿಸಬೇಕು. ಕ್ಷಮಿಸಬೇಕು. (ಪುರೋಹಿತನೊಡನೆ ಹೋಗುವರು)

[ಶಾಮರಾಯರು ಮಾತನಾಡುವಾಗ ಎಲ್ಲರೂ ಮೂಕರಂತೆ ಅವರನ್ನೇ ನೋಡುತ್ತಾ, ಅವರ ಮಾತನ್ನೇ ಕೇಳುತ್ತಿರುವರು. ರಾಮು ಅಲಂಕಾರ ಪೂರ್ತಿಯಾಗಿ ನಿಂತಿದ್ದವನು ಸುಸ್ತಾಗಿ ನಿಟ್ಟುಸಿರು ಬಿಡುತ್ತಾ, ನಿರ್ವರ್ಣವಾದ ಮುಖವನ್ನು ಜೋತುಹಾಕಿ ಕುರ್ಚಿಯ ಮೇಲೆ ಕೂಡುವನು]

**ತಂದೆ:—** ಶುದ್ಧ ಹುಡುಗು, ಶುದ್ಧ ಹುಡುಗು. ದೊಡ್ಡೋರು ಬೇಡಾ ಅಂದಿದ್ದು, ಕೇಳಿದ್ರೆ ತಾನೇ ಅನುಭವಿಸಲಿ. (ಹೋಗುವನು)

**ಬಾವ:—** ಒಳ್ಳೇ ವಧೂ ಪರೀಕ್ಷೆಯಾಯಿತಲ್ಲಾ ರಾಮೂ, ಕೊಟ್ಟು ಬಿಟ್ಟಳಿಗಸ್ತು. ಆ.... [ಭಾವ ಯೋಚಿಸುತ್ತಾ ನಿಲ್ಲುವನು. ರಾಮು ತಲೆ ಮೇಲೆ ಕೈ ಇಟ್ಟುಕೊಂಡು ಯೋಚನಾಮಗ್ನನಾಗಿರುವನು. ತೆರೆ ನಿಧಾನವಾಗಿ ಬೀಳುವುದು]

**ಕೈವಾರ ರಾಜಾರಾಯರು, ಬೆಂಗಳೂರು**

# ದಿವಾಳಿಯ ದಶಮಗ್ರಹ

**ಪಾತ್ರಗಳು :**

**ಹುಚ್ಚರಾಯ :—** ಯತ್ನಕ್ಕಿಂತ ದೈವಕ್ಕೆ, ಧರ್ಮಕ್ಕಿಂತ ಪತ್ನಿಗೆ ಅಧೀನನಾದ, ಅರುವತ್ತು ವರುಷಕ್ಕೆ ಸಮೀಪಿಸಿದ ಪೆನ್‌ಶನ್‌ದಾರ ಸಬ್‌ರಜಿಸ್ಟ್ರರ್

**ಲಕ್ಷ್ಮಂಬಾಯಿ :—** ಹುಚ್ಚರಾಯನ ಎರಡನೆಯ ಧರ್ಮಪತ್ನಿ—ಸುಮಾರು ನಾಲ್ವತ್ತು ವರುಷದವಳು.

**ವತ್ಸಲಾ :—** ರಾಯರ ಅಚ್ಚಿಯ ಚಿಕ್ಕಮಗಳು.

**ಶಕುಂತಲಾ :—** ರಾಯರ ಇನ್ನೊಬ್ಬ ಮಗಳು.

**ಅಳಿಯದೇವರು :—** ರಾಯರ ಕಿರಿಯ ಅಳಿಯ.

**ಗುಂಡೂ :—** ರಾಯರ ಒಬ್ಬನೇ ಮಗ—ಅಲ್ಪವಯಸ್ಸಿನ ಹೊಸ್ತಿಲ ಮೇಲೆ ನಿಂತಂತೆ- ೧೭ ವರುಷ ವಯಸ್ಸು.

(ರಾಯರ—**ಕಾಮದಾರರಿಗೆ** ತಕ್ಕಂತೆ ಅಚ್ಚುಕಟ್ಟಾದ—ಮನೆಯ ನಡುಮನೆಯಲ್ಲಿ, ರಾಯರು ವಿಚಾರಭರದ ಏರಾಟ ಹೆಚ್ಚಾದಂತೆ, ಭರಭರಾಟೆಯಿಂದ ಶತಪಥ ಹಾಕುತ್ತಿರುವರು. ಕೆಲ ನಿಮಿಷ ರಂಗಭೂಮಿ ಸ್ತಬ್ಧವಾಗಿದ್ದು ರಾಯರ ಹೆಜ್ಜೆಯ ಸಪ್ಪಳದ ಹೊರತು ಬೇರೆ ಏನೂ ಕೇಳಬರುವುದಿಲ್ಲ. ಆಮೇಲೆ, ಲಕ್ಷ್ಮಂಬಾಯಿ ಒಂದು ಕೈಯಲ್ಲಿ ಉರುಳೀಗಡ್ಡೆಗಳನ್ನೂ ಇನ್ನೊಂದು ಕೈಯಲ್ಲಿ ಈಳಿಗೆಯನ್ನೂ ಹಿಡಿದುಕೊಂಡು ಪ್ರವೇಶಿಸಿ, ಪಲ್ಲೆ ಹೆಚ್ಚತೊಡಗುವಳು. ರಾಯರು ಲಕ್ಷ್ಯವಿಲ್ಲದೆ ಶತಪಥ ನಡೆಸಿದುವನ್ನು ನೋಡಿ—)

**ಲಕ್ಷ್ಮಂಬಾಯಿ :—** ಹೊರಗ ಮಳಿ ಇಲ್ಲಾ, ಛಳಿ ಇಲ್ಲಾ; ಹೋಗಬೇಕು ತಿರುಗಾಡಲಿಕ್ಕೆ; ಪೆನ್‌ಶನ್ ಆದರ ತಿರುಗಾಡಲಿಕ್ಕೆ ಸುದ್ದಾ ಹೋಗಬಾರದೇನೊ! ಹೊತ್ತು ಮುಳುಗಿದರೂ ಮನಿಯೊಳಗs—

**ಹುಚ್ಚರಾಯ :—** ಇನ್ನು ಮನೀ ಬಿಟ್ಟು ಹೊರಗೆ ಬೀಳೋದು ಅಂದರ ಒಮ್ಮೆ. ನಾನೂ ಅದೇ ಹಾದಿ ನೋಡತೇನಿ!

**ಲಕ್ಷ್ಮಂಬಾಯಿ :—** ಥಣ್ಣಗs ನಾನೇ ಎಲ್ಲಿಯಾದರೂ ತೀರ್ಥಯಾತ್ರಿ ಹೊರಟುಬಿಡತೀನಿ.

**ಹುಚ್ಚುರಾಯ :—** ನೀನು ಯಾಕ....ನಾನೇ ಎಲ್ಲಿಯಾದರೂ ದೇಶಾಂತರಕ್ಕೆ ಹೋಗಿಬಿಡತೀನಿ. ನೀನು ಮನೆಯಲ್ಲಿಯೆ ಇರು, ಹೆಣ್ಣು ಮಕ್ಕಳಿ-ಗೆಲ್ಲಾ ಅಳಿಯತನ ಮಾಡಿಸಿಗೋತs!

**ಲಕ್ಷ್ಮಂಬಾಯಿ :—** ಯಾಕದು, ಸುಮ್ಮನೆ ನಾನೇ ಹೋಗಿಬಿಡತೀನಿ; ನೀವೇ ಇರ್ರಿ ಸುಖದಿಂದ. ತಿಂಗಳಾ ಒಬ್ಬರ ಒಬ್ಬರ ಖರ್ಚು ಕಡಿಮಿ ಆಯಿತು ಅಂತ. (ಸಿಟ್ಟಿನಿಂದ ಹಲ್ಲು ಹೆಚ್ಚುತ್ತ) ಮುಖ್ಯ ನನ್ನ ನಸೀಬ ಖೊಟ್ಟಿ ಅದ, ಅದಕ್ಕೆ ಯಾರೇನು ಮಾಡೋದು! ಅದಕ್ಕನೇ ಎರಡನೇ ಸಂಬಂಧ ಅಂದರ, ಕಸಕ್ಕಿಂತ ಕಡೀ ಅಂಬೋದು. ಮೊದಲನೆಯವಳ ಹೆಣ್ಣುಮಕ್ಕಳಿಗೆ ಮಾತ್ರ ಒಬ್ಬೊಬ್ಬರಿಗೆ ಐದೈದು ವರ್ಷ ಅಳಿಯತನ ಮಾಡಿಸಿದಿರಿ. (ಕಣ್ಣೀರೊರಸಿಕೊಳ್ಳುತ್ತ) ಈಗ ಇರುವಾಕಿ ಒಬ್ಬ ಕಡೆಯ ಮಗಳಿಗೆ, ಒಂದು ವರುಷ ಅಳಿಯತನ ಮಾಡಿಸಲಿಕ್ಕೆ ಮೈಮೇಲೆ ಮುಗಿಲು ಕಡಿಮುಕೊಂಡು ಬಿದ್ದ ಹಾಂಗ ಮಾಡತೀರಿ. ಆಗಲಿ ಅದಕ್ಕೇನು ಮಾಡೋದು!

**ಹುಚ್ಚುರಾಯ :—** ಹೊನs ಹೊನs ಹೂಂ, ಹೂ, ಹೂಂ! ಒಮ್ಮೆ ಹೂಂ ಅಂತಂದರ ಅಲ್ಲೇನದು? ಮತ್ತೂ ಮತ್ತೂ ಅದೇ ಮಾತು, ಅದೇ ಕಥಿ.

**ಲಕ್ಷ್ಮಂಬಾಯಿ :—** ಅದೇ; ಇಷ್ಟೊಂದು ಕಣ್ಣೀರು ಕಪಾಳಕ ಬಂದಮ್ಯಾಲೆ, ನಿರ್ವಾಹವಿಲ್ಲದೆ ಅನ್ನೋದು ಹೂಂ ಅಂತ—ಹೆಂಡತಿಯ ಹೆಸರು ತಗೊಂಡ ಹಾಂಗ! ಇಂಥಾ ಪರಿಯಿಂದ ಹೂಂ ಅನಿಸಿಗೊಂಡರ ಆಗೋದಾರs ಏನು?

**ಹುಚ್ಚುರಾಯ :—** ಇಲ್ಲs ಮಾರಾಯಳ, ಅಗದೀ ಹೃತ್ಪೂರ್ವಕವಾಗಿ ಹೇಳತೀನಿ....ಹೂಂ! ಆಯಿತಿಲ್ಲೋ? ಹೂಂ! ಇನ್ನಾರೆ ಸುಮ್ಮ-ನಾಗತೀಯಿಲ್ಲೊ?

**ಲಕ್ಷ್ಮಂಬಾಯಿ :—** ಹೊಂ-ಹಾಂಗೇ ಸೈ....ಸುಸೂತ್ರ ಒಳಗೇ ಪಲ್ಯಾ ಹೆಚ್ಚಿಗೋತs ಕೂಡತೀನಿ; ಮಾತಾಡಿದರ ಮೈಮ್ಯಾಲ ಬರತಿದ್ದರ—

**ಹುಚ್ಚರಾಯ :**— (ನಿರಾಶೆಯಿಂದ ಕೈಚೆಲ್ಲಿ) ಇನ್ನ ಯಾವ ರೀತಿ ನಿನ್ನ ಸಮಾಧಾನ ಮಾಡಬೇಕೋ ತಿಳಿಯದಂತೆ ಆಗೇದ. ಮುಪ್ಪಿನ ಕಾಲಕ್ಕೆ ಮೂರು ಮಂದಿ ಹೆಂಡರ ಕೈಯೊಳಗಿಂದs ಆ ದಶರಥಾ ಹ್ಯಾಂಗಾದರೂ ಪಾರಾದನೋ ಮಾರಾಯಾ!

**ಲಕ್ಷ್ಮಿಂಬಾಯಿ :**— ನಿಮ್ಮ ಹಾಂಗ ಅಂವಾ ಅಳೇತನಾ ಮಾಡಿಸಲಿಕ್ಕೆ ಒಲ್ಲೆ ಅಂತಿದ್ದಿಲ್ಲಾ!

**ಹುಚ್ಚರಾಯ :**— ಅಂತೇ ಇದ್ದ ಮಕ್ಕಳ್ನ ಅಡವಿಗೆ ಕಳಿಸೋ ಹೊತ್ತು ಬಂತು ಅವನಿಗೆ

**ಲಕ್ಷ್ಮಿಂಬಾಯಿ :**—ಹೆಂಡತಿನ್ನ ಕಂಡರ ಏರಾ ವರಾ ಅಂತ ಕುಣದಾಡ-ತಿದ್ದನಂತ ಆ ಮಾರಾಯಾ!

**ಹುಚ್ಚರಾಯ :**— ಏನs ಮಾರಾಯಳ, ನಿನ್ನಂಥಾಕಿ ಒಬ್ಬಳಿದ್ದರ ಹೇಳತಿದ್ದೆ ಅಂವಗ.

**ಲಕ್ಷ್ಮಿಂಬಾಯಿ :**— ನನ್ನಂಥಾಕಿ ಇದ್ದರ ಅವನ ಪುಣ್ಯಾ! ನಿಮಗೇ ಸಿಗಬೇಕಾಗಿತ್ತು ಆ ಕೈಕಯಿಾ ಅಂಥಾಕಿ, ಉರಿಸಿ ಒಲೀ ತುಂಬಿಸಲಿಕ್ಕೆ!

**ಹುಚ್ಚರಾಯ :**— (ಒಮ್ಮೆಲೆ ಜೋರ್ಳನೆ ನಗುತ್ತ) ಇಕಾ, ಹೀಂಗ ಬೇಕಾದಷ್ಟು ಮಾತಾಡು. ಆದರ ಸಿಟ್ಟಿಗೆ ಬರಬ್ಯಾಡಾ. ಅಲ್ಲಾ, ಸುಳ್ಳೇ ನೀನೂ ಮನಸ್ಸಿಗೆ ತಾಪ ಮಾಡಿಕೋತೀ; ನನಗೂ ತಾಪ ಕೊಡತೀ!

**ಲಕ್ಷ್ಮಿಂಬಾಯಿ :**— ಆಗಲಿ, ಹಾಂಗಾದರ ಅಷ್ಟು ನಾ ತ್ರಾಸ ಕೊಡತಿದ್ದರ ... ಒಳಗೇ ಹೋಗಿ ಪಲ್ಯಾ ಹೆಚ್ಚಿಗೋತೀನಿ!

**ಹುಚ್ಚರಾಯ :**— ಜೇಳಿನ ಕೊಂಡಿ! .... ಅಲ್ಲs ಪಲ್ಯಾ ಯಾವುದು ಮಾಡತೀದೀ?

**ಲಕ್ಷ್ಮಿಂಬಾಯಿ :**— ಏನು ಭಾಳ ಮನಿತುಂಬಾ ಪಲ್ಯಾ ತಂದು ಹಾಕೀರಿ.... ಹೇಳೋ ಹಾಂಗಿಲ್ಲಾ. ತಿರಗಾ ಮುರಗಾ ಒಂದು ಉಳ್ಳಾಗಡ್ಡಿ, ಒಂದು ಚವಳೀಕಾಯಿ!

**ಹುಚ್ಚರಾಯ :**— ಹಾಂಗಾದರ ಚವಳೀಕಾಯಿಾ ಪಲ್ಯಾ ಮಾಡಬೇಕು?

**ಲಕ್ಷ್ಮಿಂಬಾಯಿ :**— ಮನಿಯೊಳಗ ಕೂತವರು ಆರಿಸಿ ಕೊಟ್ಟರ ಮಾಡತೀನಿ. ಆದರ ನೀವ್ಯಾಕ ನೆರವು ಆದೀರಿ ಹೆಂಗಸರಿಗೆ—

ಹುಚ್ಚರಾಯ :— ನನ್ನ ಕರ್ಮ! ಮತ್ತ ಮನಿಗೆ ಬಂದ ಹೆಣ್ಣುಮಕ್ಕಳೂ ಅಂದ.... ಬೇಗಂ ಸಾಹೇಬರೇನು? ಅವರು ಒಂದೂ ಕೆಲಸಾ ಮಾಡಬಾರದೇನು ತೌರಮನಿಯೊಳಗ?

ಲಕ್ಷುಂಬಾಯಿ :— ಯಾಕಷ್ಟು ಆಡಿಕೊಳ್ಳೋದು ನನ್ನ ಹೆಣ್ಣುಮಕ್ಕಳಿಗೆ? (ದುಃಖ ತುಂಬಿ) ಪಾಪಾ, ಅತ್ತೀಮನಿಯೊಳಗ ಮೈಮುರಿ ದುಡಿದೂ, ಮತ್ತೂ ಇಲ್ಲಿಯೂ ದುಡೀ ಅಂತೀರಲ್ಲ; ಎಂಥಹ ಕಟುಕ ಮನಸ್ಸು ನಿಮ್ಮದು?

ಹುಚ್ಚರಾಯ :— ನೀನು ಕಲಿಸಿ ಇಟ್ಟ ಅಚ್ಛಾನೆ ಇದೆಲ್ಲಾ! (ಒಳಗಿಂದ ವತ್ಸಲೆ ಪ್ರವೇಶಿಸುವಳು)

ವತ್ಸಲಾ :— ಅವ್ವಾ, ಇವೊತ್ತು ನಿನ್ನ ಜರದ ಸೀರೀ ಉಟ್ಟುಕೊಳ್ಳಲೇನು?

ಲಕ್ಷುಂಬಾಯಿ :— ಹೂಂ. ಉಟ್ಟುಕೊ; ಆದರ ಜೋಕೆ ಆಂ! ಎಲ್ಲಿಯಾದರೂ ಕೊಕ್ಕಿಗೆ ಸಿಕ್ಕೀತು. ನೀ ಜೋಕಿಂದ ಉಟ್ಟುಕೊಂಡರ ನಿನಗೇ ಕೊಡತೀನಿ ಆ ಸೀರೀ!

ಹುಚ್ಚರಾಯ :— ಹೂಂ. ನಿನಗೇ ಕೊಡತಾಳೆ.... ಈ ಮನೀನs ನಿನ್ನ ಹೆಸರ್ಲೆ ಬರೆದು ಕೊಡತಾಳೆ!

ವತ್ಸಲಾ :— (ಸಿಡುಕಿನಿಂದ) ಅವ್ವಾ, ನೋಡಿದೇನವ್ವಾ? ಒಂದು ಸೀರಿ ಕೊಡತೀನಿ ಅಂದರ ಇಷ್ಟ ಗಡತರ ಮೈಮೇಲೆ ಬರತಾನ; ಸೇಕಿಗೆ ಮಾತ್ರ ಕಂಟಮುಟಾ ವಸ್ತ್ರಾ ಮಾಡಿಸಿ ಕೊಟ್ಟಾ. ಹಾಂಗ ನೋಡಿದರ ನನಗ ಒಂದು ಬೆಂಡೋಲೀ ಸುದ್ಧಾ ಇನ್ನೂ ಕೊಟ್ಟಿಲ್ಲಾ!

ಲಕ್ಷುಂಬಾಯಿ :— ನಿನ್ನ ತೌಡು ಹಾಕಿ ಕೊಂಡಾರವ್ವಾ; ಅವರಿಗೆ ಅಚ್ಚೀದ ಮಕ್ಕಳು ಅಂದರೆ ಅವರೇ!

ವತ್ಸಲಾ :—ನಾನು ಮಾತ್ರ ತುಚ್ಛದ ಮಗಳು.... ಅಂತೇ ಕಳವೂಟದಲ್ಲಿ ಸಿಟಗೊಂಡು ಕೂತರೆ, ಇವರಿಗೆ ಒಂದು ಫೋನೋಗ್ರಾಫ್ ಸುದ್ದಾ ಕೊಡಸಲಿಲ್ಲಾ!

ಲಕ್ಷುಂಬಾಯಿ :— ನನ್ನ ಖೊಟ್ಟಿ ನಶೀಬಾ. ಯಾವ ಕಾಲ್ಗುಣದ ಮೇಲೆ ಹುಟ್ಟಿದಿಯೊ ಏನೋ!.... ಕಡಿಯ ಅಳಿಯ ಅಂದರ ಹನ್ನೆರಡು

ತಿಂಗಳೂ ಮನಿಯಲ್ಲಿಯೆ ಇಟ್ಟುಕೊಂಡು ಅಳಿಯತನ ಮಾಡತಾರೆ. ಮನಿಯಲ್ಲಿ ಅಳಿಯಂದಿರು ಮಕ್ಕಳೂ ಅಂತಿದ್ದರೆ, ಎಲ್ಲಾ ಛಂದ!

**ಹುಚ್ಚರಾಯ**:— ಈ ಅಳಿಯಂದಿರಿಗೆ ಮಾಡಿಮಾಡಿಯೇ ನನ್ನ ತಲಿ ಬೆಳ್ಳಗಾಯಿತು! ಪೆನ್‌ಶನ್ ಆದಮೇಲೆ ಆದರೂ, ತಲಿಯ ಮೇಲೆ ಒಂದೆರಡು ಎಳಿ ಚಂಡಿಕೆ ಉಳಿಯಲೀ ಅಂತ ನಮ್ಮ ಇಚ್ಛಾ!

**ಲಕ್ಷ್ಮಂಬಾಯಿ**:— ಹೌದು ಈಗೇ ಸುರುವಾಗೇದೇನೋ ಈ ವೈರಾಗ್ಯ.

**ಹುಚ್ಚರಾಯ**;— ಅಲ್ಲs, ಆವಾಗ ಸಿಗತಿತ್ತು ಹ್ಯಾಂಗ....ಮೇಲೆ ಮುಷ್ಟೀ ಘಂಡು? ಈಗೇನದ ಮುಂಗೈಗೆ ಚಂಡು! ಪೆನ್‌ಶನ್ ಆದ ಕಾಮದಾರರು ಅಂದರ ಓದಿಬಿಟ್ಟ ವರ್ತಮಾನಪತ್ರ ಇದ್ದ ಹಾಂಗ. ಕಂಡರ ಸಾವಿರ ಸರ್ತೆ ಸಲಾಮು ಹೊಡೆಯೊ ಸಿಪಾಯರು, ಈಗ ಕಣ್ಣೆತ್ತಿ ಕೂಡಾ ನೋಡೋದಿಲ್ಲ. ನಾವೇ ಕೈಮುಗಿದರೂ, ತಿರುಗಿ ಆದರೂ ಕೈ-ಮುಗೀತಾರೊ ಇಲ್ಲೊ ಸಂಶಯ.

**ಲಕ್ಷ್ಮಂಬಾಯಿ**:— ಸಾಕು ಹೋಗ್ರಿ, ಬರೇ ನಿಮ್ಮ ರಗಳೀ ರಾಮಾ-ಯಣನೇ ಆಯಿತು....ಅಲ್ಲಾ ನಾಳೇ ನೀರತುಂಬೋ ಹಬ್ಬಾ; ಬೀಗರಿಗೆ ಪತ್ರಾನಾದರೂ ಹಾಕೀರೊ ಇಲ್ಲೊ?

**ಹುಚ್ಚರಾಯ**:— ಹಾಕೀನಿ ಮಾರಾಯಳs, ಹಾಕೀನಿ. ನಿನ್ನ ಮುಂದ ಯಾರ ಆಟ ನಡೀತsದ?

**ಲಕ್ಷ್ಮಂಬಾಯಿ**:— ಪತ್ರಾ ಹಾಕಿದ್ದರ ಮತ್ತ ಇನ್ನೊತ್ತೇ ಬರೋದು ಟೇಶನ್ನಕಾದರೂ ಹೋಗತೀರೊ?

**ಹುಚ್ಚರಾಯ**:— ತಪಾಸಣಿಗೆ ಬರೋ ಮೇಲಧಿಕಾರಿಗಳಿಂತಾ ಮಿಗಿಲಾದರು ಬಿಡು, ಈ ಅಳಿಯಂದಿರಂಬುವವರು! ನಾನು ಸಬ್‌ರಜಿಸ್ಟರ ಇದ್ದಾಗ ಸುದ್ಧಾ ಒಬ್ಬ ಆಫೀಸರ್ ಜನರಿಗೂ ಜೀ ಅಂತಿದ್ದಿಲ್ಲಾ.. ಅದೂ ಹೋಗಲಿ, ಇಷ್ಟು ಮಾಡಿಸಿಕೊಂಡರೂ ಒಬ್ಬ ಅಳಿಯಂದಿರ ನಮ್ಮ ಸಿಫಾರಸು ಮಾಡೋದಿಲ್ಲಾ. ಈ ಅಳಿಯಂದಿರ ಮರ್ಜಿ ಹಿಡಿಯೋದಂದರ ಅಗದೀ "ಥ್ಯಾಂಕಲೆಸ್ ಟಾಸ್ಕ್" ನೋಡ ಬಾಗಿಲಿಗೆ ಆನಿಸುವ ಅಗಳಿಗೆ ಅಳಿಯ ಅಂದ ಕೂಡಲೆ, ಅದೂ ಕೂs ಸಟೆದು ನಿಲ್ಲತsದಂತೆ!

**ವತ್ಸಲಾ :—** ಹೌದಪಾ, ನೀಯೇನು ಅಳಿಯನಾಗಿದ್ದಿರಲಿಲ್ಲವೇನು ?

**ಹುಚ್ಚರಾಯ :—** ಕೇಳು ಆಕಿನ್ನ !

**ಲಕ್ಷ್ಮಿಂಬಾಯಿ :—** ಏನು ಕೇಳೋದು ನನ್ನ. ಎಲ್ಲಾ ನನ್ನ ಉಪಗಾರಕ್ಕೇ ಮಾಡೋಹಾಂಗ ಮಾಡತಾರ. ನನಗೊಬ್ಬಳಿಗೇ ಮಕ್ಕಳು—ಅಳಿಯಂದಿರು, ತಮಗಲ್ಲೇನೊ !....ವಚ್ಚಾ; ನೀ ಸುಸೂತ್ರ ನಿಮ್ಮ ಮನಿಗೆ ಹೋಗಿ ಬಿಡವ್ವಾ—ಇವರ ಕಡಿಂದs ನೀವು ಅಳಿಯತನ ಮಾಡಿಸಿಗೊಳ್ಳೂದೂ ಬ್ಯಾಡಾ; ಸಿಸಿಗೊಳ್ಳೂದೂ ಬ್ಯಾಡಾ! ವತ್ಸಲೆ ಒಳಗೆ ಹೋಗುವಳು. ಲಕ್ಷ್ಮಿಂಬಾಯಿಯು ಸಿಟ್ಟಿನಿಂದ ದುಡು ದುಡುನೆ ಒಳಗೆ ಹೋಗುವಾಗ ಹುಚ್ಚರಾಯನು ಅವಳನ್ನು ಅಡ್ಡ ತರುಬಿ)

**ಹುಚ್ಚರಾಯ :—** ಹೌದs—ಬಂತೇ ಸಿಟ್ಟು, ತಡೆ ಇಲ್ಲದ! ದೇವರು ಈ ಹೆಂಗಸರಿಗೆ ಮೈಯೊಳಗ ಸಿಟ್ಟು, ಕಣ್ಣೊಳಗ ನೀರು ಇವೇ ಎರಡು ದಯಪಾಲಿಸಿದನೋ ಏನೋ !....ಅಲ್ಲ ಕೂಡ ಬಾ ಇಲ್ಲೆ. ( ಅವಳನ್ನು ಕೈ ಹಿಡಿದು ಕೂಡಿಸಿ ) ಒಟ್ಟು ನಿನ್ನ ವಾಸನಾಸಾರೇ ಏನದs ಹೇಳಿ ಬಿಡು ಒಂಧಪಾ. ಕೊರಳೊಳಗ ತಾಳಾ ಹಾಕಿ, ದಾಸಕೂಟದ ಮೆಂಬರ್ ಆಗೋ ತನಕಾ ಸರ್ತಿ....ನೀನು ಹೇಳಿದಂತೇ ಹೆಜ್ಜೇ ಹಾಕತೀನಿ.

**ವತ್ಸಲಾ :—** (ಗಾಬರಿಗೊಂಡು ಧಾವಿಸುತ್ತ, ಒಂದು ತಾರಿನ ಪಾಕೀಟನ್ನೂ ಜೊತೆಗೆ ಸಹಿಯ ಫಾರ್ಮನ್ನೂ ಹಿಡಿದುಕೊಂಡು ಪ್ರವೇಶಿಸಿದಳು.) ಅಪ್ಪಾ, ಇದು ನೋಡು ತಾರು. ಹೊರಗೆ ಪೋಸ್ಟಮನ್ ತಂದುಕೊಟ್ಟ!

**ಹುಚ್ಚರಾಯ :—**(ಫಾರ್ಮಿನ ಮೇಲೆ ಸಹಿ ಮಾಡುವನು )

**ಲಕ್ಷ್ಮಿಂಬಾಯಿ :—** (ಚಡಪಡಿಕೆಯಿಂದ ಮುಳುಗುವ ಹಡಗದಂತೆ ಹೊಯ್ದಾಡುತ್ತ) ತಾರು ಯಾಕ ಬಂದಿದ್ದೀತs ನಮ್ಮವ್ವಾ ಸುಡ್ಲಿ! ಥೂ, ನಮ್ಮವ್ವಾ, ಹಬ್ಬದಾಗ ಇದೇನೂ ಅಂತೀನಿ ಅವಲಕ್ಷಣ! (ಗಂಡನಿಗೆ ಆರ್ತತೆಯಿಂದ) ಮೇಲೆ ಕ್ಷೇಮಸಮಾಚಾರ ಅದsನೊ ಇಲ್ಲೊ ? ಎಲ್ಲಿಂದ ಬಂದsದ ತಾರು? ನೇಕೂ ಅವರು ನೆಟ್ಟಗಿದ್ದಾರಂತ ಹೌದಲ್ಲೋ? ಹೀಂಗ್ಯಾಕ ಸುಮ್ಮನೆ ನಿಂತಿರಿ? ಹೇಳಬಾರದದೇ ಭಡಾನೆ?

**ಹುಚ್ಚರಾಯ :—** ವತ್ಸಲಾ, ಭಡಾನೇ ಇದನ್ನ ಹೊರಗ ಪೋಸ್ಟಮನ್ನಸಿಗೆ ಕೊಟ್ಟು ಬಾ. (ನಗುತ್ತ ಲಕ್ಷ್ಮುಂಬಾಯಿಗೆ) ತಾರೂ ಅಂದರ ಅನಾಹುತನೇ ಇರಬೇಕೂ ಅಂತ ಈ ಹೆಂಗಸರ ಹಟ!

**ಲಕ್ಷ್ಮುಂಬಾಯಿ :—** ಎಲ್ಲಿಯು ಹಟಾ ಬರತ್ತsದ ಮಣ್ಣಾಗ? ಕ್ಷೇಮ ಸಮಾಚಾರ ಅದsನೊ ಇಲ್ಲೋ ಹೇಳಬಾರದರೀ ಭಡಾನೆ?

**ಹುಚ್ಚರಾಯ :—** ನಮ್ಮ ಕ್ಷೇಮಸಮಾಚಾರ ತಗೊಳ್ಳಲಿಕ್ಕೇನೇ ಬರುವವರಿದ್ದಾರೆ. ಐದನೆಯ ಬಾಣಂತಿತನಕ್ಕೆ ನಿನ್ನ ಹಿರಿಯ ಮಗಳು ಇಂದೇ ಬರುವವಳಂತ!

**ಲಕ್ಷ್ಮುಂಬಾಯಿ :—** (ನಗುತ್ತ) ಅಯ್ಯಯ್ಯ!,ಎಂದ? (ಉಲ್ಲಾಸದಿಂದ ಮುಖ ಅರಳುವುದು) ಆಕಿ ಒಬ್ಬಾಕಿ ಇಲ್ಲಾ ಅಂತ ಚಡಪಡಿಕಿ ಆಗಿತ್ತು!

**ಹುಚ್ಚರಾಯ :—** ಹೌದು, ದುಷ್ಕಾಲ ಒಂದೇ ಆಗಿತ್ತೂ ಅಂತ ನನಗೂ ಚಡಪಡಿಕಿ ಆಗಿತ್ತು. ಆಯಿತು, ಆದಕ್ಕ ಕುಂದಣಾ ಕೂಡಿಸಿದ ಹಾಂಗ, ಅಧಿಕ ಮಾಸ ಒಂದೂ ಆದಂತಾಯಿತೂ ಅಂತ ಸಮಾಧಾನ ಅನಿಸಿತು ನೋಡು!.... ಸರಕಾರ ಈ ವಿಷಯಕ್ಕೆ ಯಾಕೆ ಕಿವಿಮುಚ್ಚಿಕೊಂಡು ಕೂತsದ ಅಂತೇನಿ. ಕಾರಕೂನರು ಲಂಚಾ ತಿನಬಾರದೂ ಅಂತ ಕಾಯಿದೆ ಮಾಡೋ ಸರಕಾರ, ಅಳಿಯಂದಿರು ಮಾವಂದಿರ ಸುಲಿಗೀ ಮಾಡಬಾರದೂ ಅಂತ ಮಾತ್ರ ಕಾಯಿದೆ ಮಾಡಬಾರದೇನೊ! ಆದ್ಯಾಕ ಮಾಡಬಾರದೂ ಅಂತೀನಿ!....ಹುಶ್, ಏನು ಮಾಡಲಿ, ನನ್ನ ನಶೀಬ! ಸರಕಾರದ ಮಾತು ಒತ್ತಟ್ಟಿಗಿರಲಿ; ಹದಿನೆಂಟು ಮಂದಿ ಹೆಣ್ಣು ಮಕ್ಕಳನ ನನ್ನ ಒಂದೇ ಒಂದು ಹೊಟ್ಟೆಯಿಂದ ಹುಟ್ಟಿಸಿದ ಆ ಬ್ರಹ್ಮನಿಗಾದರೂ ತಲೀ ಅದsನೊ ಇಲ್ಲೋ ಅಂತೀನಿ.... ತಲಿಗೊಂದೊಂದು ವಿಚಾರ ಮಾಡಿಯೆ ಈ ಹಿಂಡು ಜನರನ್ನ ನನ್ನ ಕೊರಳಿಗೆ ಕಟ್ಟಿದನೊ ಯಾರಿಗೆ ಗೊತ್ತು?....ಅಥವಾ ಈ ಹದಿನೆಂಟು ಮಂದಿ ಹೆಣ್ಣುಮಕ್ಕಳನ ಹಡೆಯಬೇಕಾದರೆ ನನ್ನ ತಲೀನs ಕೆಟ್ಟಿತ್ತೋ ಏನೋ!

**ಲಕ್ಷ್ಮುಂಬಾಯಿ :—** ಹದಿನೆಂಟು ಹೆಣ್ಣುಮಕ್ಕಳೋ ಏನು ಐವತ್ತೋ? ಹುಟ್ಟಿದ ಹೆಣ್ಣುಮಕ್ಕಳ ಸಂಖ್ಯೆ ಕೂಡ ತಿಳಿಯದಷ್ಟು ತಲೀಕೆಟ್ಟಿ

ಹೋಯಿತೋ ಏನು?.... ವತ್ಸಲಾ, ಒಳಗೆ ಬಾ. ಹೆಂಗಸರಿಗೆ ಅಡಿಗೆಯ ಮನೆಯೆ ಸೌಖ್ಯ. (ಎನ್ನುತ್ತ ತಾನೊಬ್ಬಳೆ ಹೋಗುವಳು)

**ಹುಚ್ಚರಾಯ** :— ಹದಿನೆಂಟು ಇಲ್ಲಾ....ಒಂಬತ್ತು!

**ವತ್ಸಲಾ**:— ಅಪ್ಪಾ, ನಮ್ಮಂಥವರು ಹುಟ್ಟಿ ನಿನಗೆ ಇಷ್ಟೊಂದು ಕಷ್ಟ. ಮದುವೆಯಾಗುವ ಮೊದಲು ಹಡೆದವರಿಗಷ್ಟೇ ಭಾರ, ಮದುವೆಯಾದ ಮೇಲೆ, ಮದುವೆಯಾದವರಿಗೆ ಹಡೆದವರಿಗೆ ಕೂಡಿಯೆ ಭಾರ!

**ಹುಚ್ಚರಾಯ** :— ಹಡೆದ ಮೇಲಂತೂ ಹೊರಸಿಗೂ ಭಾರ!

**ವತ್ಸಲಾ**:— ಅಪ್ಪಾ ನನ್ನ ಮದವೀ ಮಾಡೋದರ ಬದಲಾಗಿ, ನನಗೆ ಉಚ್ಚಶಿಕ್ಷಣ ಕೊಟ್ಟಿದ್ದರ—

**ಹುಚ್ಚರಾಯ** :— ಇಷ್ಟೊತ್ತಿಗೆ ತ್ರಿಶಂಕುವಿನ ಸ್ವರ್ಗ ಸಿಗುತ್ತಿತ್ತು. ಯಾಕಂದರೆ ಬೆಳದ ಹುಡಿಗಿನ್ನ ಮನೆಯಲ್ಲಿಟ್ಟುಕೊಂಡಾನs ಅಂತ ಬ್ರಾಹ್ಮಣ ಸಮಾಜದವರು ನನ್ನನ್ನ ಭೂಮಿ ಬಿಟ್ಟು ಮೇಲಕ್ಕೆ ಏರಿಸಿ ಬಿಡುತ್ತಿದ್ದರು. ಮೇಲೆ ಹೋದ ಮೇಲೆ, ಎಲ್ಲ ಹೆಣ್ಣುಮಕ್ಕಳ ಮದುವೆ ಮಾಡದೆ ವಾಸನಾ ಹಿಡಿದು ಬಂದೀನೀ ಅಂತ ಕೆಳಗೆ ಅಟ್ಟಿ ಬಿಡುತ್ತಿದ್ದರು.

**ವತ್ಸಲಾ** :— ನಾನು ಕಲಿತಿದ್ದರೆ, ನನ್ನ ಒಬ್ಬಳ ಹೊಟ್ಟೆಯನ್ನಾದರೂ ತುಂಬಿಕೊಂಡು, ಯಾವುದಾದರೊಂದು ಶಾಲೆಯ ಮಾಸ್ತರಿಣಿ, ಆಗಿರುತ್ತಿದ್ದೆ! ಕಲಿತ ಗಂಡಸರು ಕೆಲಸವಿಲ್ಲದೆ ಕೂಡುವ ಹಾಂಗ, ಕಲಿತ ಹೆಂಗಸರು ಮಾತ್ರ ಕೈಯಲ್ಲಿ ಕೆಲಸವಿಲ್ಲದೆ ಮನೆಯಲ್ಲಿ ಕೂಡುವ ಪ್ರಸಂಗ ಇಲ್ಲ!

**ಹುಚ್ಚರಾಯ**:— ನಿನಗೆ ಹಾಗೆ. ಕಲಿಸಿದ್ದೇ ಅಂದರೆ ಸಬ್‌ರಜಿಸ್ಟ್ರರರ ಮಗಳು ಬಹಳ ಕಲಿತಳೂ ಅಂತ—

**ವತ್ಸಲಾ** :— ನಿಜವಾಗಿನೂ ನಿಮಗೆ ಮರ್ಯಾದೆ ಸಿಗುತ್ತಿತ್ತು!

**ಹುಚ್ಚರಾಯ** : — ಇಲ್ಲಾ, ನನ್ನ ನೆತ್ತೀ ಕುಕ್ಕಿಬಿಡುತ್ತಿತ್ತು ...ಈ ಹಾಳಿಯ ಹದ್ದಿನಂತಹ ಹಳೆಯ ಸಮಾಜ!

**ವತ್ಸಲಾ** :— ಹೆಂಗಸಿನ ಗೋಳು ಅಂದರೆ—

**ಹುಚ್ಚರಾಯ :—** ಹೆಣ್ಣು ಹಡೆದವರ ಗೋಳು ನೆನೆದರೆ, ತಲೆಕೆಟ್ಟು ಕಾದು ಕಾದು ಸಿಡಿದು, ಸಾವಿರ ಹೋಳು ಆಗುವಷ್ಟು ಸಂತಾಪ ಆಗತದ! ಮಗ ಹುಟ್ಟಿದರೆ ಮನೆ ಉದ್ಧಾರ; ಮಗಳು ಹುಟ್ಟಿದಳೂ ಅಂದರ ಮನೆಯ ಸರ್ವಸ್ವವೂ ಭದ್ರ! ಮದುವೆ ಆಗುವವರೆಗೂ ಅಲ್ಪವಯಿ ಅಂತ ಇವರ್ನ ಸಂರಕ್ಷಣೆಮಾಡಬೇಕು. ಮದುವೆ ಯಾದ ಮೇಲೆ, ಮಗಳೂ ಅಳಿಯ ಇಬ್ಬರೂ ಅಲ್ಪವಯಿ ಅಂತ ಮನೆಯಲ್ಲಿಟ್ಟುಕೊಂಡು ಸಂರಕ್ಷಣೆ ಮಾಡಬೇಕು! ತಂದೆ ಸಂರಕ್ಷಣೆ ಮಾಡಿದಾ ಅಂತ ಉಪಕಾರ ಹಿಡಿತಾರೇನು ಈ ಹೆಣ್ಣುಮಕ್ಕಳು? "ನಿಮ್ಮ ಹೆಸರು ಬೇಡಾ" ಅಂತ ಮತ್ತೊಂದು ಹೆಸರು, ಅಡ್ಡ ಹೆಸರು ಇಟ್ಟುಕೊಂಡು ಹೋಗತಾರೆ. ಇಷ್ಟಾದರೂ ನಮಗೆ ಕಾಳಜೀ ತಪ್ಪಿತೂ ಅಂತ ಇಲ್ಲಾ. ವರಿಷ್ಠ ಅಧಿಕಾರಿಗಳ ಮರ್ಜೀ ಕಾಯು ವಂತೆ, ಈ ಅರಿಷ್ಟ ಅಳಿಯಂದಿರ ಕೈಕಾಲು ತೊಳೆದು, ಎರಡೆರಡೂ ಕೈಯಿಂದ ಸುರಿಯಬೇಕು ಅವರ ಪಾದತೀರ್ಥ. ಮೇಲೆ ಮತ್ತೆ ಅಳಿಯ ದೇವರಂತೆ! ಯುಗಕ್ಕೊಮ್ಮೆ ಅವತರಿಸುವ ಆ ಪರಮಾತ್ಮಾ ಈ ಕಲಿಯುಗದೊಳಗ ಅಳಿಯಂದಿರ ಅವತಾರ ಧರಿಸಿ ಭೂಮಿಗಿಳಿ- ದದ್ದೆ ಖರೇ ಆದರೆ, ಬೇಗನೆ ಅವನನ್ನ ಸ್ವರ್ಗಕ್ಕಟ್ಟೋದೆ ಗುಣಾ ಕಾಣಿಸತದ.

**ವತ್ಸಲಾ :—** (ಕಣ್ಣೀರು ಒರಸಿಕೊಳ್ಳುತ್ತ) ಅಪ್ಪಾ, ನನಗ ಬೇಕಾದಷ್ಟು ಕೆಡಕು ಮಾತಾಡು; ಅವ್ವ ಒಳಗೆ ಹೋದಳೂ ಅಂತ, ಮಾಡಿಕೊಂಡವ ರನ್ನ ಆಡಿಕೊಳ್ಳಬ್ಯಾಡಾ! ನನ್ನ ಕೆಟ್ಟ ನಸೀಬದ ಕಾಲಾಗ, ಅವರು ಯಾಕೆ ಅನಿಸಿಕೊಳ್ಳಬೇಕು....ಸುಳ್ಳ ಸುಳ್ಳೇ?....ಭೂಮಿಯ ಮೇಲೆ ಹೆಣ್ಣಾಗಿ ಹುಟ್ಟಿದ ನನ್ನದೇ ದೊಡ್ಡ ಅಪರಾಧ ಆಗೇದ!

**ಹುಚ್ಚರಾಯ :—** ಅರ್ಥಾತ್ ನಿನ್ನ ಹಡೆದ ನನ್ನದೇ ಮಹಾ ಅಪರಾಧ. ನಾನು ಮದುವೆಯಾಗುವ ಮೊದಲೇ ಯಾವ ಸ್ವಾಮಿಗಳೂ ಶಾಯಿ ಕೊಡುವವರು ಇದ್ದಿದ್ದಿಲ್ಲ....ತಣ್ಣಗೆ ಇನ್ನು ಮೇಲೆ ಆದರೂ ಕಾಯಿ ಸಿಗತದೇನೊ ನೋಡತೀನಿ!....(ಸ್ವಗತ) ಇನ್ನೆಲ್ಲಿಯ ಕಾಯಿ; ನನಗೆ ಸಿಗೋದು ನನ್ನ ಕರ್ಮಫಲ! (ಒಳಗಿನಿಂದ ಲಕ್ಷ್ಮಿಬಾಯಿ ಪ್ರವೇಶಿಸು

ವುದಕ್ಕೂ ವಿರುದ್ಧದಿಕ್ಕಿನಿಂದ ಶಕುಂತಲೆ ಪ್ರವೇಶಿಸುವುದಕ್ಕೂ ಮೇಳವಾಗುವುದು. ಲಕ್ಷ್ಮಿಂಬಾಯಿ ನೋಡಿದವಳೆ ಸಂಭ್ರಮದಿಂದ ಬಾಯಿತೆರೆಯುವಳು. ಹುಚ್ಚರಾಯ ಬೆಪ್ಪಾಗಿ ನಿಲ್ಲುವನು.)

**ಲಕ್ಷ್ಮಿಂಬಾಯಿ :—** ಅಯ್ಯಯ್ಯ! ಯಾವಾಗ ಬಂದೀ? ಭಲೊ ಆಯಿತು ಬಿಡು ನಮ್ಮವ್ವಾ; ಎಲ್ಲಾರೂ ಹಬ್ಬಕ್ಕ ಕೂಡಿಧಾಂಗ ಆಯಿತು! ನಿಮ್ಮಕ್ಕನೂ ಒಬ್ಬಾಕಿ ಅನಾಯಾಸ ಹಿಡಿಯಲಿಕ್ಕೆ ಬರುವಾಕೆ ಇದ್ದಾಳ!

**ಶಕುಂತಲಾ :—** ಅವ್ವಾ ಹೊರಗೆ ಟಾಂಗಾದಂವ ನಿಂತಾನ, ಅವನಿಗೊಂದು ಚಾರಣೀ ಕೊಡಬೇಕಾಗಿತ್ತು!

**ಲಕ್ಷ್ಮಿಂಬಾಯಿ :—** (ಹುಚ್ಚರಾಯನಿಗೆ) ಕೇಳಿಸಲಿಲ್ಲೇನು?

**ಹುಚ್ಚರಾಯ :—** (ಫುಟಿದು ಬಿದ್ದವನಂತೆ) ಆಂ?

**ಲಕ್ಷ್ಮಿಂಬಾಯಿ :—** ಟೊಂಕದೊಳಗ ಚಾರಣೀ ಅವ ಏನು?

**ಹುಚ್ಚರಾಯ :—** ಚಿಲ್ಲರೆ ಇಲ್ಲಾ, ನೂರು ರೂಪಾಯಿ ನೋಟು ಅದ!

**ಲಕ್ಷ್ಮಿಂಬಾಯಿ :—** (ಸಿಡುಕಿನಿಂದ) ನೂರು ರೂಪಾಯಿದೋ ಮೂರು ರೂಪಾಯಿದೊ! ವತ್ಸಲಾ, ಒಳಗೆ ನನ್ನ ಟ್ರಂಕಿನೊಳಗ ನಾಲ್ಕಾಣೆ ಅವ ನೋಡು, ಕೊಡು ಹೋಗು! (ಕೊರಳೊಳಗಿನ ಕೀಲಿಕ್ಕೈ ಸರ ಕೊಡುವಳು)

**ಹುಚ್ಚರಾಯ :—** (ಕೀಸರಿಟ್ಟು ಶಕುಂತಲೆಗೆ) ತಾವು ಯಾಕ ಬಂದಿದ್ದೀರಿ?

**ಶಕುಂತಲೆ :—** ಏನೋಪಾ, ಈ ಸಾರೆ ಖರ್ಚು ಬಹಳ ಬಂದಿತಂತ; ಅದಕ್ಕೇ ಒಂದು ತಿಂಗಳು ಮನೀ ತೆಗೆದುಬಿಟ್ಟರು!

**ಹುಚ್ಚರಾಯ :—** ಅದರ ಜೊತೆಗೆ ಮೂರು ಅಕ್ಷರಗಳನ್ನೂ ತೆಗೆದು ಬಿಟ್ಟರೇನು?—

**ಲಕ್ಷ್ಮಿಂಬಾಯಿ :—** ನೀವೂ?

**ಹುಚ್ಚರಾಯ :—** ನೀ ಬಂದೆಯಿಲ್ಲೊ ಅಡ್ಡ?

**ಗುಂಡೂ :—** (ಅರ್ಭಟಿಯಿಂದ) ಅಪ್ಪಾ, ಇವೊತ್ತಿನಿಂದ ನಾನು ಪೇಟಿಯೊಳಗ ಸಾಮಾನು ತಗೊಂಡು ಬರಲಿಕ್ಕೆ ಹೋಗೋದೇ ಇಲ್ಲಾ!

**ಹುಚ್ಚರಾಯ** :— ಯಾಕೋ? ನಿನಗೇನಾಯಿತು, ಅಂಗಡಿಕಾರರಿ ಗೇನಾಯಿತು?

**ಗುಂಡೂ** :— ದೀಪಾವಳಿ ಬಂದದೆ. ಎಲ್ಲರೂ ಹಿಂದಿನ ಬಾಕೀ ಚುಕ್ತಾ ಮಾಡಿ, ಮುಂದಿನ ಸಾಮಾನು ಒಯ್ಯಿರಿ—ಅಂತಾರ.

**ಹುಚ್ಚರಾಯ** :— ಸದ್ಯಕ್ಕೆ ಕಿರಾಣಿ ಮತ್ತು ಕಾಳಿನ ಸಾಮಾನ, ಅದು.... ತಗೊಂಡು ಬಾ!

**ಗುಂಡೂ** :— ಅವರಂತೂ ಮೊದಲ ಕೊಡೋದಿಲ್ಲಾ ಅಂತಾರ!

**ಹುಚ್ಚರಾಯ** :— ಏನಾದರೂ ಸ್ವಲ್ಪ ಸಮಾಧಾನ ಹೇಳಿ ತಗೊಂಡ್ರು ಬಾರೋ!

**ಗುಂಡೂ** :— ನೀನೇ ಹೋಗು ಬೇಕಾದರ. ಮೊದಲು ತಲೀಕೆಟ್ರು ಉದ್ದರೀ ಮಾಡೋದು; ಆ ಮ್ಯಾಲೆ ಗೋಳಾಡೂದು! ಹಿಂದಕ ಎಲ್ಲಾ ನಿನಗ ಮರ್ಯಾದೀ ಕೊಟ್ಟ ಹಾಂಗ ಈಗ ಕೊಡೋದಿಲ್ಲಾ ಅಂಬೋದು ನಿನಗ ಗೊತ್ತೇ ಇಲ್ಲ. ನೋಡಿದಲ್ಲಿಲ್ಲಾ ಬರೇ ಉದ್ದರಿ-ಉದ್ದರಿ! ಆಸ್ತಿ ಅಂದರ ನಿಮ್ಮಪ್ಪಬರೇ ಉದ್ದರೀನೇ ಮಾಡ್ಯಾನೇನೋ ಅಂತ ಕೇಳತಾರ ಎಲ್ಲಾರೂ!

**ಹುಚ್ಚರಾಯ** :— ಮಕ್ಕಳು! ಐದುಸಾವಿರ ರೂಪಾಯಿಗೆ ಲಾಯಿಫ್ ಇನ್ಶ್ಯುರನ್ಸ್ ಇಳಿಸೀನಿ ಅಂಬೋದು ಅವರಿಗೇನು ಗೊತ್ತು?

**ಗುಂಡೂ** :— ಐವತ್ತು ಸಾವಿರ ಗಳಿಸಿದರೂ ನಮ್ಮ ಪಾಲಿಗೆ ಮಾತ್ರ ಐದು ಸಾವಿರ ಲಾಯಫ್ ಇನ್ಶ್ಯುರನ್ಸ ಮಾತ್ರ!

**ಹುಚ್ಚರಾಯ** :— ಅದ್ಯಾಕೋ, ಅದರ ಜೊತೆಗೆ—

**ಗುಂಡೂ** :— ಅದರ ಜೊತೆಗೆ ಹತ್ತು ಸಾವಿರ ರೂಪಾಯಿ ಸಾಲ. ಬರೇ ಹೆಣ್ಣುಮಕ್ಕಳಿಗೆ ಮಾಡೋದರೊಳಗ, ಇದ್ದ ಒಬ್ಬ ಗಂಡಸ ಮಗನ್ನ ಕಸದೊಳಗಿನ ಕರದ ಹಾಂಗ ಮರೆತುಬಿಟ್ಟಿ!

**ಹುಚ್ಚರಾಯ** :— ಎಷ್ಟು ಮಾತಾಡತೀಯೊ ಗುಂಡ್ಯಾ, ಹದಿನೆಂಟು ವರುಷಕ್ಕೆ ಇನ್ನೂ ಒಂದು ವರುಷ ಕಡಿಮಿ ಅದ!

**ಗುಂಡೂ** :— ಅಂತೇ ಈಗಲಾದರೂ ಎಚ್ಚರ ತೊಗೋತೀನಿ!

**ಲಕ್ಷ್ಮಿಂಬಾಯಿ**:-- ಯಾಕೋ, ನಾಲಿಗೆ ಬಹಳ ಉದ್ದ ಹೋಗಲಿಕ್ಕೆ ಹತ್ತಿತು? ಮತ್ತೊಂದು ಓದು ಇಲ್ಲಾ, ಬರಹ ಇಲ್ಲಾ, ಹಿರಿಯರಿಗೆ ಬೇಕಾದ ಹಾಂಗ ತಿರುಗಿ ಮಾತಾಡೋದೊಂದು ಕಲತೀದಿ. ಹಬ್ಬಾ ಹುಣ್ಣಿವಿಗೆ-ಮನೆಯೊಂದ ಮೇಲೆ-ನಾಲ್ಕು ಮಂದೀ ಮಕ್ಕಳೂ ಬರುವವರೇ. ನನ್ನ ಜೀವಮಾನ ಇರೋತನಕ ಬರತಾರ; ನಾಳೆ ನಾನೇ ಹೋದೇನಂದರೆ, ನಿನ್ನ ಮನಿಯ ಹೊಸ್ತಿಲದೊಳಗ ಕಾಲು ಸಹಾ ಹಾಕೋದಿಲ್ಲಾ....ಯಾರೂ!

**ಗುಂಡೂ**:— ನೀನs?

**ಲಕ್ಷ್ಮಿಂಬಾಯಿ**:— ಸಾಕು, ಬಾಯಿಮುಚ್ಚು; ರೊಕ್ಕ ಕೊಡುವವರು ಕೊಡತಾರ, ಒಂದಿಷ್ಟು ಈಡಾಗಿ ಸಾಮಾನು ತರಲಿಕ್ಕೆ ಏನಾಗತ್ಸದೊ ನಿನಗ ಧಾಡಿ?

**ಹುಚ್ಚರಾಯ**:— ಉದ್ದರೀ ಅನ್ನಲಿಕ್ಕೆ ಎಷ್ಟಾದರೂ ಆದsನೊ!

**ಗುಂಡೂ**: – ಎಷ್ಟೆಂದರೇನು? ಕಿರಾಣಿಯದು ಎಪ್ಪತ್ತು ರೂಪಾಯಿ; ಕಾಳಿನಂಗಡೀದು ನೂರಾಹತ್ತು; ಸ್ಟೇಶನರಿ ಐವತ್ತಾರು; ಕಾಪಡ ದುಕಾನದ್ದು ನೂರಾಎಂಭತ್ತೈದು; ಸಿಂಪಿಗೇರವನದು ಇಪ್ಪತ್ತೈದು; ಹಾಲು—ಮೊಸರಿನವರದು ಹದಿನೆಂಟು; ಹೇರ್‌ಕಟಿಂಗ್ ಸಲೂನಿನದು ಐದುರೂಪಾಯಿ.

**ಹುಚ್ಚರಾಯ**:— ಅಯೋಗ್ಯಾ, ಬಾಯಿಮುಚ್ಚು! ಹೇರ್‌ಕಟಿಂಗ್ ಉದ್ದರೀ ನಿನ್ನದೊ ನನ್ನದೊ?....ನಾಲ್ಕು ವರುಷ ಆಯಿತು, ಒಂದು ಮ್ಯಾಟ್ರಿಕ್ ಆಗೋಣ ಆಗವೊಲ್ಲದು....ಮತ್ತೆ ಮಾತಾಡಲಿಕ್ಕೆ ಬರತಾನ. ಹೆಂಗಸರ ಮದುವೆ ಆಯಿತು, ಗಂಡುಹುಡುಗರಿಗೆ ಹದಿನೆಂಟು ವಯಸ್ಸಾಯಿತು ಅಂದರ, ಹಡೆದವರ ಜವಾಬದಾರೀ ತಪ್ಪಿತು. ನಾನು ಆಸ್ತೀ ಮಾಡಿಟ್ಟೇ ಹೋಗಬೇಕೂ ಅಂತ ಕಾಯದೆ ಇಲ್ಲಾ!

**ಗುಂಡೂ**:— ಮತ್ತ ಸಾಲಾ?

**ಹುಚ್ಚರಾಯ**:— ಮುಂದಿನ ವರುಷ ಇನ್ಶೂರನ್ಸ್ ಡ್ಯೂ ಆಗತ್ಸದ. ಎಲ್ಲಾರ ಸಾಲಾ ಮುಟ್ಟಿಸಿ, ಈ ಸಂಸಾರದಿಂದ ಈ ಜೇವನ ವ್ಯವಹಾರದಿಂದ ಒಮ್ಮೆ ಫರ್ಲು ಹರಕೊಂಡು ಬಿಡತೀನಿ!

**ಶಕುಂತಲೆ** :— ಅವ್ವಾ, ಸುಸೂತ್ರ ನಾನು ತಿರುಗಿ ಹೋಗಿ ಬಿಡತೀನಿ. ನಾನೇನೊ ಉಮೇದದಿಂದ ಬಂದಿದ್ದೆ; ಆದರೆ ಬಂದ ಕೂಡಲೆ ಮಂಗಳಾರತೀನೆ ಆಯಿತು!

**ಲಕ್ಷುಂಬಾಯಿ** :— ಅವರ ಮಾತು ತೊಗೊಂಡು ಏನು ಮಾಡತೀದಿ! ಇತ್ತಿತ್ತಲಾಗ ಅವರ ತಲೀ ಸ್ವಲ್ಪ ನಾದುರಸ್ತ ಆಗೇದ; ಪೆನ್‌ಶನ್ ಆದಾಗಿನಿಂದs!

**ಹುಚ್ಚರಾಯ** :— ಅಲ್ಲಾ ನನ್ನ ಹೆಣ್ಣುಮಕ್ಕಳನ ಧರ್ಮಾರ್ಥ ಕೊಟ್ಟೇನಿ ಅಂತ ತಿಳಕೊಂಡಾರೋ ಏನು ಈ ಅಳಿಯಂದಿರೆಂಬುವವರು? ಒಬ್ಬೊಬ್ಬರಿಗೆ ಎರಡೆರಡು ಮೂರುಮೂರುಸಾವಿರ ವರದಕ್ಷಿಣೆ ಕೊಟ್ಟೊ, ಇಷ್ಟು ಕಾಡಿಸೋದು ಅಂದರ! ಧರ್ಮಪತ್ನಿ ಅಂದರ ಧರ್ಮಾರ್ಥ ಗೃಹಿಣೀ ಅಂತ ತಿಳಿದಾರ. ಧರ್ಮಪತ್ನಿಯ ತವರಮನೆ ಅಂದರ ಧರ್ಮಾರ್ಥ ಬೋರ್ಡಿಂಗ್ ಆ್ಯಂಡ ಲಾಜಿಂಗ್ House ಅಂತ ಇವರ ಉದಾತ್ತ ಕಲ್ಪನೆ! ಧರ್ಮೇಚ ಅರ್ಥೇಚ, ಮಾವನ್ನ ಭದ್ರ ಮಾಡತೀನಿ—ಅಂತ ಅಗ್ನಿ ಸಾಕ್ಷಿ ಆಣೀಮಾಡಿದ ಹಾಂಗ ಕಾಣತsದ!

**ಲಕ್ಷುಂಬಾಯಿ** :— ಇವೊತ್ತು ಸಂಜೆಗೇ ಬಂದು ಕೂತಾರು; ಮೊದಲು ಸಾಮಾನು ತರಿಸೋ ವ್ಯವಸ್ಥಾ ಮಾಡಿರಿ!

**ಹುಚ್ಚರಾಯ** :— ನನ್ನ ತಲೀ ಅಂತೂ ಕೆಟ್ಟೇ ಹೋಗೇದ! ಇದಕ್ಕೆ ನಿನ್ನ ಸಮ್ಮತಿ ಕೂಡಾ ಸಿಕ್ಕsದ!

**ಲಕ್ಷುಂಬಾಯಿ** :— ಹೋಗೊ ಗುಂಡ್ಯಾ, ಮೊದಲು ಸಾಮಾನು ತಗೊಂಡು ಬಾ!

**ಗುಂಡೂ** :— ಅಳಿಯಂದಿರಿಗೆ ದೀಪಾವಳಿ; ಮಾವಯ್ಯಗೆ ಮಾತ್ರ ದಿವಾಳಿ!

**ಹುಚ್ಚರಾಯ** :— ಇಂತಹ ಜಾಮಾತರು ಗಂಟುಬಿದ್ದ ಮೇಲೆ—

**ಗುಂಡೂ** :— ಒಬ್ಬರಲ್ಲದ ಹಾಂಗ ಒಂಬತ್ತು ಮಂದಿ—ಒಂಬತ್ತು ಗ್ರಹಗಳ ಹಾಂಗ!

**ಹುಚ್ಚರಾಯ** :— ಒಂದು ನವಗ್ರಹ ಯಂತ್ರಾ ಮಾಡಿಸತೇನಿ. ಅದನ್ನ ನೋಡಿದ ಕೂಡಲೆ ಒಂದೊಂದs ಗ್ರಹಾ ಸಿಡಿದು ಹೋಗಿರಬೇಕು!

**ಗುಂಡೂ** :— ಬೀಗರು ಬರುವ ಮೊದಲೇ ಮನೀ ಬದಲೀ ಮಾಡಿ ಬಿಡೋದು ಒಳ್ಳೇ ತಂತ್ರ ಕಾಣಿಸತ್ತದ !

**ಶಕುಂತಲೆ** :— ಬಂದವಳು ನಾನೊಬ್ಬಳೇ. ಅವರೇನೂ ಬರೋದಿಲ್ಲಾ, ಅಷ್ಟು ಯಾಕೆ ಅಡಿಕೊಳ್ಳೋದು ? ಮದುವೆಯಾಗಿ ಮೂರುವರುಷ ಆದರೂ ಒಂದು ಜೋಡು ಬೆಂಡೋಲಿಯ ಹೊರತಾಗಿ ಮತ್ತೇನೂ ಕಾಣಲಿಲ್ಲ. ಅದೇ, ವಚ್ಚಿಗೆ ಮಾತ್ರ ಎರಡೆರಡು ಜೋಡು ಬಿಲ್ವಾರ ಮಾಡಿಸಲಿಕ್ಕೆ ಬಂತು !

**ವತ್ಸಲಾ** :— ಹೌದವ್ವಾ, ನಿನ್ನ ಹಾಂಗ ನನಗೆ ವಜ್ರದ ಮೂಗುಬಟ್ಟು ಕೊಟ್ಟಾರೇನು ? ನಿನ್ನ ಹಾಂಗ ನನಗ ಬನಾರಸಿನ ಪತ್ತಲಾ ಕೊಟ್ಟಾರೇನು ?

**ಹುಚ್ಚರಾಯ** :— ಆ ವಜ್ರದ ಮೂಗುಬಟ್ಟು ತಾ, ಅರಿದುಕೊಂಡಾದರೂ ಕುಡೀತೀನಿ....ಅಥವಾ ಇಂದೇ ಬನಾರಸ ಯಾತ್ರೆಗೆ ಹೊರಟು ಬಿಡ ತೀನಿ ಕೈಯೊಳಗ ತಾಳಾ ತೊಗೊಂಡು !

**ಗುಂಡೂ** :— (ಯಾರವರು ?....ಎಂದು ಹೊರಗೆ ಹೋಗಿ, ಒಂದು ಪತ್ರ ತೆಗೆದು ಕೊಂಡು ಬರುವನು.) ಇದು ನೋಡು ಅಪ್ಪಾ, ಕಿರ್ಲೋಸ್ಕರವಾಡಿ ಯಿಂದ ಹಿರಿಯ ಅಳಿಯಂದಿರು ಬರುವರಂತ !

**ಹುಚ್ಚರಾಯ** :— (ಗಾಬರಿಗೊಂಡು ಸಿಡುಕಿನಿಂದ) ಹೂಂ ! “ ಸುಸ್ವಾಗ-ತವ್ ” ಅಂತ ಖಂಬಾ ನಿಲ್ಲಿಸು ಮನಿಯ ಮುಂದ.

**ಗುಂಡೂ** :— ಏನ್ caution ಅಂತ ಹಚ್ಚಲ್ಯೊ ? ಬರೋ ಕಾರಣಾ ಆದರೂ ನೋಡಿದಿಯಾ ? ಏನೋ, ಆಪಲ್ಯಾ ಚೈನೀ ಪ್ರಮಾಣೇ-ಸ್ವೇಚ್ಛಾ ಪ್ರವಾಸದ ತಿಕೀಟು ತಗೊಂಡು ಬರುವವರಿದ್ದಾರಂತೆ !

**ಹುಚ್ಚರಾಯ** :— ಹ್ಯೂ, ಇಲ್ಲಿ ಊಟಾ ಮಾಡಲಿಕ್ಕೆ ಇಚ್ಛಾ ಭೋಜನಾ, ತಿರುಗಾಡಲಿಕ್ಕೆ ಸ್ವೇಚ್ಛಾಪ್ರವಾಸ. (ಚಿಕ್ಕ ಅಳಿಯನು ಒಳ್ಳೇ ಜಂಭದಿಂದ ಬರುವನು, ಹಮಾಲನು ಗುಡ್ಡ ಎತ್ತರ ಸಾಮಾನು ತಂದು ಇಟ್ಟು ಹೋಗುವನು, ಆಳಿಯ ಅವನಿಗೆ ರೊಕ್ಕ ಕೊಟ್ಟು ಕಳಿಸುವನು. ಹೆಣ್ಣು ಮಕ್ಕಳೆಲ್ಲಾ ಒಳಗೆ ಹೋಗುವರು.)

**ಅಳಿಯ :—** (ಹೆಂಡತಿ ನೋಡುತ್ತ ಒಳಗೆ ಹೋಗುತ್ತಿರಲು, ಅವಳು ಬರಬೇಕೆಂಬ ಕುತೂಹಲದಿಂದ ಚೀಕರಿಸುತ್ತ ನಿಲ್ಲುವನು. ಗುಂಡೂ ಈ ಸಂಜ್ಞೆ ನೋಡಿ ಒಳಗೆ ಹೋಗುವವನು. ಮಾವಯ್ಯ ಕ್ಷಣ ಹೊತ್ತು ಸುಮ್ಮನೆ ನಿಲ್ಲುವನು. ಅಳಿಯನೂ ಸುಮ್ಮನೆ ನಿಲ್ಲುವನು.)

**ಹುಚ್ಚರಾಯ :—** (ಎಷ್ಟೋ ಹೊತ್ತಾದ ಮೇಲೆ) ಓ-ಓ-ಓಹೋ! ಬಂದಿರೇನು; ಹ-ಹ-ಹ-ಸಂತೋಷ (ಕಟ್ಟ ಮೋರೆ ಮಾಡಿ) ಬಹಾಳ ಸಂತೋಷ–ಬಹಾಳಾ ಸಂತೋಷ!....(ಎನ್ನುತ್ತ ಅಡುಗೆಯ ಮನೆಯ ಹಾದಿ ಹಿಡಿಯುವನು) ವತ್ಸಲಾಬಾಯಿ, ಕೈಕಾಲು ತೊಳಕೊಳ್ಳಲಿಕ್ಕೆ ನೀರು ಕೊಡವ್ವಾ! (ಹೋಗುವನು)

**ವತ್ಸಲಾ :—** (ಪ್ರವೇಶಿಸಿ, ನಾಚಿ ಒಂದು ಮೂಲೆಗೆ ನಿಲ್ಲುವಳು.)

**ಅಳಿಯ :—** (ಒಳ್ಳೆಯ ದರ್ಪದಿಂದ) ಇವೊತ್ತು ಯಾರು ಬರತಾರಂಬೋದು ಗೊತ್ತಿತ್ತೊ ಇಲ್ಲೋ?

**ವತ್ಸಲಾ :—** ಹೂಂ! (ಮತ್ತೆ ಮೌನ)

**ಅಳಿಯ :—** ನಾನು ಗಾಡೀಗೆ ಬರತೀನೀ ಅಂಬೋದು ಗೊತ್ತಿತ್ತೋ ಇಲ್ಲೋ?

**ವತ್ಸಲಾ :—** ಗೊತ್ತಿತ್ತು!

**ಅಳಿಯ :—** ಗಾಡಿ ಎಷ್ಟೊತ್ತಿಗೆ ಬರತ್ತದ ಅಂಬೋದು ಗೊತ್ತಿತ್ತೋ ಇಲ್ಲೋ?

**ವತ್ಸಲಾ :—** ಏನದೂ ಸುತ್ತು ಸುತ್ತಾಡಿ ಕೇಳೋದು? ಯಾರು ಬರಬೇಕು ಸ್ಟೇಶನ್ನಿಗೆ?

**ಅಳಿಯ :—** ಯಾಕೆ, ನಿಮ್ಮಪ್ಪನ (ಒಳಗೆ ಲಕ್ಷ್ಯ ಹೋಗಿ ಎಚ್ಚರು ಬಂದಂತಾಗಿ, ಧ್ವನಿ ಸ್ವಲ್ಪ ಸಣ್ಣಾಗಿ ಮಾಡಿ) ನಿಮ್ಮಪ್ಪನ ಕಾಲು ಕುಂಟು ಬಿದ್ದಿದ್ದವೇನು?

**ವತ್ಸಲಾ :—** ನಮ್ಮಪ್ಪನ್ನ ಆಡಿಕೊಳ್ಳೋದು ನಿಮಗೇನು ಕಾರಣಿಲ್ಲಾ?

**ಅಳಿಯ :—** ಹೂಂ! ಅಂದರ? ನಾಯಾರು ಅಂಬೋದು ಗೊತ್ತದsನೋ ಇಲ್ಲೋ ನಿಮ್ಮಪ್ಪಗ?

**ವತ್ಸಲಾ :—** ಎಲ್ಲಾ ಗೊತ್ತದs; ನೀವು ಸುಳ್ಳೇ ಅವನ ತಲೀ ಕೆಡಸಬ್ಯಾಡ್ರಿ!

**ಅಳಿಯ :—** ನನಗಿಂತಾ ನಿಮ್ಮಪ್ಪನೇ ಹೆಚ್ಚೇನು ನಿನಗೆ? ಅಲ್ಲಾ, ನಾನು ಒಳಗೆ ಬರುತ್ತಲೇ ಒಂದು ನಮಸ್ಕಾರ ಕೂಡಾ ಮಾಡಲಿಲ್ಲಾ. ಇದು

public insult ಅಂತ ನಾನು ಯಾಕೆ ತಿಳಕೊಳ್ಳಬಾರದು? ಕಾಯಿದೇಸೀರ್ ನಿಮ್ಮಪ್ಪನ ಮೇಲೆ ಖಟ್ಲೆ ಹಾಕಲಿಕ್ಕೆ ಬರತ್ತದೆ. ಇವೊತ್ತು ಸಂಜೆಯು ಮುಂದೆ ನನ್ನ ಎಂಟು ಹತ್ತು ಫ್ರೆಂಡ್ಸ್ ಬರುವವರು ಇದ್ದಾರೆ ಮತ್ತೆ! ( ವತ್ಸಲೆ ಆಶ್ಚರ್ಯದಿಂದ ಗಾಬರಿಯಾಗಿ–'ಆಂ' ಎನ್ನುವಳು. ) ಅವರಿಗೂ ಇದೇ ರೀತಿಯಿಂದ ಅಪಮಾನ ಆದರೆ, ನಾನು ರೀತೀಪ್ರಕಾರ ಸ್ಟೆಪ್ಸ್ ತಗೋಬೇಕಾಗತ್ತದ—ಅಂತ ಹೇಳು! ಅವರಲ್ಲಿ ಒಬ್ಬಿಬ್ಬರು ಕ್ರಿಶ್ಚನ್ಸ್ ಒಬ್ಬಿಬ್ಬರು ಮಹಮಡನ್ಸ್ ಇದ್ದಾರೆ; ಮತ್ತ ಮಹಮಡನ್ಸ್ ಅಂತ ಪಾಕಿಸ್ತಾನ ಮಾಡೋ ಕಾರಣಿಲ್ಲಾ. ನಮ್ಮೆಲ್ಲರಿಗೂ ಕೂಡಿಯೇ ಊಟಕ್ಕೆ ಹಾಕಬೇಕು. ನಡುವೆ ಒಂದು ದಿವಸ non-vegetarian food ಸಹ ಮಾಡಬೇಕಾಗಬಹುದು. ಮೊದಲೇ ಈಗಳೇ ವಾರ್ನಿಂಗ್ ಕೊಟ್ಟಿರತೇನೆ. ಹಿಂದಾಗಡೆ ನಾಲ್ಕು ಮಂದಿಯೊಳಗ ನೀನು ಏನಾದರೂ ಕಂಯ್ ಕುಂಯ್ ಮಾಡಿದರೆ ನೋಡು ಮತ್ತ!

**ವತ್ಸಲಾ :—** ನಮ್ಮಪ್ಪ ಅಂದರ ಏನಂತ ಮಾಡೀರಿ ನೀವು?

**ಅಳಿಯ :—** Damn it; ಮಾವನಂದ್ರೇನು? ಅಳಿಯದೇವರ most obediently—

**ವತ್ಸಲಾ :—** ಸಾಕು, ಮಾವನ ಮನೆ ಅಂದರೇನು ಖಾನಾವಳೀ ಅಲ್ಲಾ!

**ಅಳಿಯ :—** ಆಂ! ಇದೇನು ವೈಮೇಲೆ ಎಚ್ಚರಾದರೂ ಅದsನೊ ಇಲ್ಲೊ?

**ವತ್ಸಲಾ : —** ಮೊದಲೇ ಎಚ್ಚರ ತಗೊಳ್ಳಿರಿ!

**ಅಳಿಯ :—** ಇದು ನೋಡು, ಮೊದಲೇ ಎಚ್ಚರಕೊಟ್ಟಿರತೀನಿ! ಕಳವೂಟದೊಳಗಿನ ಗ್ರಾಮಫೋನು ಈಗಲಾದರೂ ಕೊಡು ಅನ್ನು! ಬೇಕಾದರೆ ಅಳಿಯತನದ್ದು ಕಳವೂಟದ್ದು ಕೂಡಿಯೇ ಒಂದು ರೇಡಿಯೋ ಕೊಟ್ಟುಬಿಡೂ ಅನ್ನು. ( ಸುತ್ತಲೂ ನೋಡಿ— ) ಇದೇನಿದು ವ್ಯವಸ್ಥೆ? ತಿಸ್ತಾಗಿ ಒಂದು ಫರ್ನೀಚರ್ ಸುದ್ಧಾ ಇಲ್ಲಾ. ಇದೇನು ಜಮುಖಾನಿ, ಇದೇನು ಹರಕು ಲೋಡು? ನಮ್ಮ ಫ್ರೆಂಡ್ಸ್ ಬಂದರೆ ನಿಮ್ಮಪ್ಪನ ಶಿಸ್ತು ನೋಡಿ, ನನ್ನ ಕಿಮ್ಮತ್ತು ಕಟ್ಟ್ಯಾರು.

**ವತ್ಸಲಾ** :— ಇಲ್ಲಿ ಯಾರೂ ಬರೋ ಕಾರಣಾನೇ ಇಲ್ಲಾ !

**ಅಳಿಯ** :—Hold your tongue ! ಹೆಂಗಸರು ತೌರಮನಿಗೆ ಬಂದ ಕೂಡಲೆ, ಇಲಿ ಗೂಡಿನೊಳಗೆ ಸೇರಿದಂತೆ ಆಗತ್ತsದಲ್ಲs ? ಹೆಚ್ಚೂ ಕಡಿಮೆ ಮಾತಾಡಿದ್ದೀ ಆದರೆ, ರೀತಿಪ್ರಕಾರ ಸ್ಟೆಪ್ಸ್ ತೊಗೋಂಡೇ ಬಿಡತೀನಿ ನೋಡು !

(ಹುಚ್ಚರಾಯನು ಸಿಟ್ಟಿಗೆದ್ದು ಬರುವನು. ಅವನ ಕೈಹಿಡಿದು ಜಗ್ಗುತ್ತ ಲಕ್ಷುಂಬಾಯಿ ಬರುವಳು.)

**ಹುಚ್ಚರಾಯ** :— ನೀವು steps ಇಳೀದೇ ಬಿಡ್ರೀ ಅಂತೀನೀ, ಹೊಸ್ತಿಲ ಕೆಳಗ. ನಮ್ಮ ಮನೀ ಅಂದರ ನಿರುದ್ಯೋಗಿ ಅಳಿಯಂದರ ಧರ್ಮಾರ್ಥ ವಿಶ್ರಾಂತಿಗೃಹ ಅಲ್ಲ !

**ಅಳಿಯ** :— ನಿಮ್ಮ ಮಗಳ್ನ ನನಗೆ ಕೊಟ್ಟಿರಿ. ನೆನಪು ಅದsನೊ ಇಲ್ಲೊ?

**ಹುಚ್ಚರಾಯ** :— ಎಲ್ಲಾ ನೆನಪು ಆದ ! ನೀವೂ ನೆನಪು ಇಡಿರಿ. ನಾನು ನಿಮ್ಮ ಮಾವಾ, ಒಬ್ಬ ಮಾನವಾ—ಅಂಬೋದನ್ನ !.... ಜಗತ್ತಿನೊಳಗೆ revolution ಇಲ್ಲದೆ evolution ಆಗೋದಿಲ್ಲ ! ಹಿಂದಿನ ಬಾಯಿ ಸತ್ತ ಮಾವ ನಾನಲ್ಲ. ಮಗಳನ್ನು ಹಡೆದರೂ ಮಾನವನಾದ ಮಾವ ನಾನು !

**ಅಳಿಯ** :— ನಾನು ಅಳಿಯದೇವರು !

**ಹುಚ್ಚರಾಯ** :— ನೀವು ದಶಮಗ್ರಹ. ನಿಮ್ಮಂತಹ ಗ್ರಹಗಳು ಕೂಡಿಯೆ ನಮ್ಮ ಮನೆ ಈ ವ್ಯವಸ್ಥೆಗೆ ಬಂದಿತು. ನಿಮ್ಮ ಅಳಿಯತನ ನಿಮ್ಮ ಗೆಳೆಯರ ಮನೆಯಲ್ಲಿಯೆ ಆಗಲಿ ! ದಿನಾ ಒಂದು ಪಕ್ವಾನ್ನ ಆಗಲಿ; ದಿನಾ ಒಂದು ಪಾಕಿಸ್ತಾನ ಆಗಲಿ. ಒಂದು ದಿನ ಬೇಕಾದರೆ ನಾನೂ ಬರತೇನೆ ಮಾಸಲೆ ನೋಡಲಿಕ್ಕೆ !

**ಲಕ್ಷುಂಬಾಯಿ** :— ಹುಚ್ಚs ಹಿಡೀತೋ ಏನೋ ಇವರಿಗೆ ! ನಿನ್ನಿನಿಂದಲೂ ತಲೆಗೆ ಸ್ವಲ್ಪ ತ್ರಾಸ ಆದ ಹಾಗೆ ಮಾಡಲಿಕ್ಕೆ ಹತ್ತ್ಯಾರ ! ಯಾವಾಗ ಲಾದರೂ ಒಮ್ಮೊಮ್ಮೆ ಹೀಗೆ ಸನ್ನಿ ಕೂಡಿದ ಹಾಗೆ ಮಾಡತಾರ.

ಇವರಿಗೆ ಅದೊಂದು ರೋಗನೇ ಆದೆ....ತಾವು ಏನೂ ತಪ್ಪು ತಿಳಿದು ಕೊಳ್ಳಬಾರದು !

**ಹುಚ್ಚರಾಯ** :— ನನ್ನ ತಲೀ ನನ್ನ ಹೆಗಲಮೇಲೆ ಅದೆ !

**ಅಳಿಯ** :— ನಿಮ್ಮ ಮಗಳ್ನ ನಿಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಬಿಡಿರಿ ಹಾಗಾದರೆ; ನಾನು ಹೊರಡತೇನೆ.

**ಹುಚ್ಚರಾಯ** :— (ನಗುತ್ತ) ಹ-ಹ-ಹ ! ನನ್ನ ಹೆಗಲ ಮೇಲೆ ನನ್ನ ತಲೆಯ ಭಾರ ! ತಲೆಯ ಮೇಲೆ ನನ್ನ! ಮಗಳ ಭಾರ, ಇಷ್ಟೇ ಹೌದಲ್ಲೋ ಶಿಕ್ಷೆ? ಈ ಶಿಕ್ಷೆ ನೀವು ಮೊದಲೇ ಕೊಟ್ಟು ಬಿಟ್ಟಿದ್ದರೆ ನಾನಿನ್ನೂ ಎಷ್ಟೋ ದುಡ್ಡು ಉಳಿಸುತ್ತಿದ್ದೆ !....ನಾನು ಹಡೆದ ಮಗಳು, ನನ್ನ ಮನೆಯಲ್ಲಿಯೆ ಇರಲಿ. ಅವಳಿಗೆ ಶಿಕ್ಷಣ ಕೊಡುವೆ ! ಅವಳಿಗೆ ಉಚ್ಚ ಶಿಕ್ಷಣ ಕೊಡುವೆ. ತನ್ನ ಹೊಟ್ಟೆಯನ್ನು ತಾನೇ ತುಂಬಿಕೊಳ್ಳಲಿ. ಜಗತ್ತು ಮುಂದೆ ಬರಬೇಕಾದರೆ ಪ್ರತಿಭಟನೆ, ಪ್ರತಿಕ್ರಾಂತಿ ಬೇಕೇಬೇಕು !

**ಅಳಿಯ** :— ಅವಳ ಒಪ್ಪಿಗೆಯಿದೆಯಷ್ಟೇ ?

**ಲಕ್ಷುಂಬಾಯಿ** :— (ಕಣ್ಣೀರು ಒರಸಿಕೊಳ್ಳುತ್ತ) ಪುಣ್ಯಾ ಕಟ್ಟಿಕೊಳ್ರಿ ನನ್ನ ಮಗಳಿಗೆ ವನವಾಸ ತರಬೇಡ್ರಿ !

**ಹುಚ್ಚರಾಯ** :— (ಯಾವುದನ್ನೂ ಲಕ್ಷ್ಯಕ್ಕೆ ತರದೆ) ಅವಳ ಅಪ್ಪನ ಒಪ್ಪಿಗೆ ಯದೆ. ನೀವು ಮುಂದೆ ಸಾಗಿರಿ !

**ಲಕ್ಷುಂಬಾಯಿ** :— ನಡುನೀರಿನಲ್ಲಿ ಮುಳುಗಿಸಿ ಹೋಗಬೇಡ್ರಿ. ಅವರಿಗೆ ಹುಚ್ಚು ಹಿಡಿದದೆ. ನನ್ನ ಮೋರೆ ನೋಡಿರಿ, ಮಗಳ ಮೋರೆ ನೋಡಿರಿ !

**ಹುಚ್ಚರಾಯ** ;— ಹ-ಹ !, ನನ್ನ ಮೋರೆ ಸ್ವಲ್ಪ ನೆಟ್ಟಗೆ ನೋಡಿರಿ ನಾನು ಹುಚ್ಚರಾಯ-ಅಂತ ಹುಚ್ಚು ಹಿಡಿದಿದೆಯೇನು ನನಗೆ ? ಸಮಾಜದ ಹುಚ್ಚು ನಡತೆ ನೋಡಿ ಈಗ ಅನಿಸತ್ತದ....ನನಗೆ ಎಂಥಾ ಹುಚ್ಚು ಹಿಡದಿತ್ತು ಆವಾಗs....ಅಂತ.

**ಅಳಿಯ** :— Good Bye

**ಹುಚ್ಚರಾಯ**:— ನಮಸ್ಕಾರ ಹೋಗಿ ಬರ್ರಿ, ಅಥವಾ ಬರಲೇ ಬ್ಯಾಡ್ರಿ!

('ಅಳಿಯ ಸಾಮಾನು ಕಟ್ಟಹತ್ತುವನು. ವತ್ಸಲಾ ಅಳುತ್ತ ಅವನ ಕಾಲಿಗೆ ಬೀಳುವಳು. ಲಕ್ಷ್ಮಿಂಬಾಯಿ ಒಮ್ಮೆ ಗಂಡನ ಮೋರೆ, ಒಮ್ಮೆ ಅಳಿಯನ ಮೋರೆ ನೋಡುತ್ತ ನಿಂತು ಬಿಡುವಳು. ಹುಚ್ಚರಾಯ ಒಳಗಿನಿಂದ ಒಂದು ಜೋಡು ಕಾಳಾ ತಂದು ಬಾರಿಸುತ್ತ ಬರುವರು. ಗುಂಡೂ ಚಹಾದ ಕಪ್ಪು ಬಸಿ ತಂದು—"ಚಹಾ ತಗೊಳ್ಳಿರಿ"! ಅನ್ನುತ್ತ ಇದನ್ನು ನೋಡಿ, ನೆಲಕ್ಕಪ್ಪಳಿಸಿ ಗಾಬರಿಗೊಂಡು ನಿಲ್ಲುವನು.)

—: ತೆರೆ :—

—ಎನ್. ಕೆ. ಕುಲಕರ್ಣಿ
ಧಾರವಾಡ

# ಶೈಲಾಜಿ



### ಪಾತ್ರ ಪರಿಚಯ

ಶೈಲಾಜಿ: ತಿಮ್ಮನಾಯಕನ ಹೆಂಡತಿ
ಸರಲಾಜಿ: ಗೋಪನಾಯಕನ ಹೆಂಡತಿ

ತಿಮ್ಮನಾಯಕ: } ವಿಜಯನಗರದ ಸೈನ್ಯದಲ್ಲಿ
ಗೋಪನಾಯಕ: } ದಳವಾಯಿಗಳು.

ಗಣಪನಾಯಕ: ಸರಲಾಜಿಯ ಅಣ್ಣ, ಉಂಡಾಡಿ.

ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ರಾಯಚೂರು ವಿಜಯಕ್ಕಾಗಿ ಹೋದ ವೇಳೆಯು. ಅಂದರೆ ಕ್ರಿ. ಶ. ೧೫೨೦ ನೇ ತಿಂಗಳು. ಬೇಸಿಗೆಯ ಕಾಲ. ರಾಯಚೂರು ಕೋಟೆಗೆ ಒಂದು ಹರದಾರಿ ದೂರದಲ್ಲಿ ಮಲ್ಲಾಬಂಡಿಯ ಹತ್ತರ ವಿಜಯನಗರದ ಸೈನ್ಯ ಬೀಡುಬಿಟ್ಟಿದೆ.

## ಒಂದನೆಯ ಪ್ರವೇಶ.

ಪಾಳ್ಯದ ಒಂದು ಬಿಡಾರ. ನೆಲದ ಮೇಲೆ ರತ್ನಗಂಬಳಿ ಹಾಸಿದೆ. ಗಾದಿ ಲೋಡುಗಳನ್ನು ಇಟ್ಟಿದೆ. ಎದುರಿಗೆ ದುಂಡನ್ನ ಪೀಠವಿದೆ. ಈಚೆಗೊಂದು ವೀಣೆ ಇದೆ. ಆಚೆಗೆ ಬರಹದ ಸಾಮಗ್ರಿಗಳಿವೆ. ಗೋಡೆಗಳಿಗೆಲ್ಲ ಗತಿಸಿದ ಕನ್ನಡ ವೀರರ ಭಾವಚಿತ್ರಗಳನ್ನು ಅಂಟಿಸಿವೆ. ಎರಡು ಕಡೆಗೆ ಬಾಗಿಲುಗಳಿವೆ. ಎರಡು ಕಿಡಕಿಗಳೂ ಇವೆ. ಅವಕ್ಕೆ ಪರದೆಗಳನ್ನು ಹಾಕಿದೆ. ದುರ್ಗಾಪೂಜೆಯು ಅದೇ ಮುಗಿದು ಎರಡು ಮೂರು ತಾಸಾಗಿದೆ. ಅಂದರೆ ಮಧ್ಯರಾತ್ರಿ ಸಮಯ. ತೆರೆಯು ಮೇಲಕ್ಕೆ ಎದ್ದಾಗ ರಣಭೂಮಿಯ ಮೇಲೆ ಯಾರೂ ಇರುವದಿಲ್ಲ.

[ ತಿಮ್ಮನಾಯಕನು ಪ್ರವೇಶಿಸುತ್ತಾನೆ. ದೀಪವನ್ನು ದೊಡ್ಡದು ಮಾಡಿ ಹೆರವರ ಬರವನ್ನು ನೋಡುವದಕ್ಕೆಂದು ಬಾಗಿಲ ಕಡೆಗೆ ನೋಡುವನು. ಪೂಜಾ ಉಡುಪಿನಲ್ಲಿದ್ದ ಶೈಲಾಜಿಯು ಬರುವಳು. ]

ಶೈಲಾ :— ಬಾ, ನನ್ನ ಮುದ್ದು ಸರಲಾ ಬಾ (ಪತಿಗೆ) ಗೋಪನಾಯಕರೂ ಬಂದಂತಿದೆ.

ತಿಮ್ಮ :— [ ಒಳಗೆ ಬರಬೇಕೋ ಬೇಡವೋ ಎಂಬ ವಿಚಾರದಲ್ಲಿಯೇ ಬಾಗಿಲಲ್ಲಿ ನಿಂತ ಗೋಪನಾಯಕನ ಕಡೆಗೆ ಹೋಗಿ ] ಏನು ವಿಚಾರ ಮಾಡುತ್ತಿರುವಿ ನಾಯಕಾ ?

[ ತಿಮ್ಮನಾಯಕನು ಗೋಪನಾಯಕನನ್ನು ಒಳಗೆ ಎಳೆದು ಬಾಗಿಲನ್ನು ಮುಚ್ಚುವನು. ]

ಸರಲಾ :— ಈಗಾಗಲೇ ಬಹಳ ತಡವಾಗಿ ಬಿಟ್ಟಿದೆ!

ಶೈಲಾ :— ತಡೆ? ಈ ಉಲ್ಲಾಸ ಸಮಯ ರಾತ್ರಿಯಲ್ಲಿ 'ತಡ' ಎಂಬ ಶಬ್ದದ ನೆನವು ಸಹ ಆಗುವದಿಲ್ಲ. ಈ ದಿನ ದುರ್ಗಾ ಪೂಜೆಯು ಎಷ್ಟು ಮೋಹಕವಾಗಿತ್ತು! ಪೂಜೆಯೆಂದರೆ ಇದಕ್ಕನ್ನ ಬೇಕು! ರಾಜ ಪುರೋಹಿತರು ಪೂಜೆಯನ್ನು ಮುಗಿಸಿದ ಮೇಲೆ ಸ್ವತಃ ಮಹಾರಾಜರು ಫಲಗಳನ್ನು ಪುರುಷರಿಗೂ, ಪೂಗಳನ್ನು ನಾರಿಯರಿಗೂ ಕೊಡಲು ನಿಂತ ವೈಭವವನ್ನು ನೋಡಲು ನನ್ನ ಈ ಕಣ್ಣುಗಳು ಸಾಲದಂತಾದವು. ಆಗ ನಮ್ಮಿಬ್ಬರನ್ನೂ ನೋಡಿ ರಾಯನು ಮುಗುಳುನಗೆ ನಕ್ಕಾಗ ನನಗಾದ ಆನಂದ! ಸುಖ!

ಸರಲಾ :— ಹೌದು ಶೈಲಾ! ನಿನಗೆ ಆನಂದವಾಗಿರಬಹುದು ಸುಖ—

ಶೈಲಾ :— ನಿನಗೆ ಮುಂದೆ ಬರಲು ಮನಸ್ಸಿರಲಿಲ್ಲ. ಆದಕ್ಕೆ ತುಸು ಧೈರ್ಯ ಬೇಕಾಗುವದು. ನನ್ನಷ್ಟೇ ಲೀನವಾಗುತ್ತಿದ್ದಿ. ಆದರೆ ನೀನು ಹಿಂದೆ ಉಳಿದಿ. ನನ್ನ ಪತಿಯು ಪ್ರಸಾದಕ್ಕಾಗಿ ಮುಂದೆ ನುಗ್ಗಿದಾಗ ಆಕಸ್ಮಾತ್ತಾಗಿ ನಾನೂ ಅವನ ಸಂಗಡಲೇ ನಿಂತಿದ್ದೆನು.

ಸರಲಾ :— ಆರ್ಯಪುತ್ರಾ!

ಗೋಪ :— ಅವಳನ್ನು ನೋಡಿರಿ! ಮೈಮೇಲೆ ಒಂದೂ ಆಭರಣವಿಲ್ಲ. ಅಲಂಕಾರವೂ ಇಲ್ಲ.

ಸರಲಾ :—ಒಡವೆಗಳನ್ನು ಮಾಡಿಸಿಕೊಟ್ಟಿದ್ದರೆ—

ಶೈಲಾ :—ನಿಜ. ಗೋಪನಾಯಕರೇ, ಅವಳ ಪೋಷಾಕು ತೀರ ಸಾದಾ ಇದೆ. ಇವಳನ್ನಿಷ್ಟು ನೀವು ನನ್ನ ವಸ್ತ್ರಾಗಾರಕ್ಕೆ ಕಳುಹಿಸಿರಿ.

ಗೋಪ:— ಹೌದು. ಶೈಲಾಜಿಯವರೇ.

ಶೈಲಾ:— ಮತ್ತು ನೀವು (ವಿನಯದಿಂದ ಬಾಗಿ) ದಳವಾಯಿಗಳೇ ನೀವೂ ಬರಬಹುದು.

ಗೋಪ:— (ಎಲೆ ಅಡಕೆಯ ಚೀಲವನ್ನು ಬಿಚ್ಚುತ್ತಾ), ಹೌದು. ಹೆಂಡತಿಗೆ ಆಭರಣ, ಮತ್ತು ಶೀರೆಗಳನ್ನು ಯಾವ ಯಾವವು ಮತ್ತು ಎಷ್ಟೆಷ್ಟು ಕೊಳ್ಳಬೇಕೆಂಬುದೂ ನನಗೆ ತಿಳಿಯುವದು.

ಸರಲಾ:— ರಾತ್ರಿ ಬಹಳವಾಗಿದೆ.

[ಗೋಪನಾಯಕನು ಎಲೆ ಅಡಿಕೆಯನ್ನು ಹಾಕಿಕೊಂಡು ತಿಮ್ಮನಾಯಕನಿಗೆ ಚೀಲವನ್ನು ಕೊಡುವನು.]

ತಿಮ್ಮ:— ಹುಂ! ಎಲ್ಲವೂ ಎದ್ವಾತದ್ವಾ ಶ್ರೀಮತೀ ಸರಲಾಜೀ, ಗೋಪನಾಯಕನೂ ನಾನೂ........

ಶೈಲಾ:— (ತೋರಿಕೆಯ ಸಿಟ್ಟಿನಿಂದ) ಆಗದು. ಇಲ್ಲಿ ಮಾತ್ರ ನನ್ನೆದುರು ಜೂಜಿನಾಟವಾಡಬಾರದು. ಗೊತ್ತಿದೆ ನಿಮ್ಮದು.

ತಿಮ್ಮ:— ಗೋಪನಾಯಕನಿಗೆ ನಾನೊಂದು ಆಟವನ್ನು ಕೊಡಬೇಕಾಗಿದೆ,

ಗೋಪ:— ಹೌದು. ಅದು ನಿಜ. ಈ ದಿನ ರಾತ್ರಿ ನಾನು ಹಿಡಿದ ಕಾರ್ಯಗಳೆಲ್ಲವನ್ನೂ ಉತ್ಸಾಹದಿಂದ ಯಶಸ್ವಿಯಾಗಿ ನೆರವೇರಿಸುತ್ತಿದ್ದೇನೆ. ದುರ್ಗಾ ಪೂಜೆಯ ಸಮಾರಂಭದ ಕಾಲದಿಂದಲೂ,

ಶೈಲಾ:— ದಲವಾಯಿ ಗೋಪನಾಯಕರೇ, ಇಲ್ಲಿ ನಾನು ಇಸ್ಪೇಟು ಆಟವನ್ನು ಆಡಗೊಡುವದಿಲ್ಲ. ಮತ್ತು ಇದೇನು, ತಂಬಾಕ ತಿಂದು ಇಲ್ಲಿಯೇ ಉಗುಳುವಿರೇನು?

ಗೋಪ:— ಆಣೆಯನ್ನು ಮಾಡುವೆನು ಬೇಕಾದರೆ; ಇದನ್ನು ಮರೆತೇ ಬಿಟ್ಟಿದ್ದೆನು. ಹಾಗೆ ನೋಡಿದರೆ ಈ ದಿನ ರಾತ್ರಿ ಎಲ್ಲವೂ ನನಗೆ ಅರುವುಮರುವಾಗತೊಡಗಿದೆ. (ಉಗುಳಲು ಅತ್ತಿತ್ತ ನೋಡುವನು)

ಶೈಲಾ:— ಹಾಗೆ ಉಗಳಬೇಡಿರಿ. ಆರ್ಯಪುತ್ರರ ಸಂಗಡ ಆಚೆಯ ಬಿಡಾರದಲ್ಲಿ ನೀವು ಎಲೆ ಅಡಿಕೆ ತಂಬಾಕುಗಳನ್ನು ಮೆಲ್ಲಬಹುದು ಬೇಕಾದರೆ.

ತಿಮ್ಮ :— ಹೌದು; ತಂಬಾಕ ತಿನ್ನದೇ ಬಹಳ ಹೊತ್ತಾಗಿ ಹೋಯಿತು. ಈಗ ಅದು ನನಗೆ ಬೇಕಾಗಿದೆ. ಬಾ, ಬಾ. ಗೋಪನಾಯಕಾ (ಎಳೆದುಕೊಂಡು ಸಾಗುವನು)

ಸರಲಾ :—ಆರ್ಯಪುತ್ರರೇ,

[ಗೋಪನಾಯಕನು ಸರಲಾಜಿಯ ಕಡೆ ನೋಡುವನು. ಮುಂದೆ ಸಾಗಲು ಹಿಂದೆ ಮುಂದೆ ನೋಡುವನು. ಅವನ ಕೈ ಹಿಡಿದು ತಿಮ್ಮನಾಯಕನು ಎಳೆದೊಯ್ಯುವನು.

ಶೈಲಾ :— ಸರಲಾ, ಪಾಪ! ಎಷ್ಟು ದಣಿದಿರುವಿ!

ಸರಲಾ :— (ಸಿಟ್ಟಿನಿಂದಲೂ ದುಃಖದಿಂದಲೂ) ದಣಿದಿರುವಿ!

ಶೈಲಾ :— ಹೌದು ಗೆಳತಿ! ನಿದ್ರೆ ಕಟ್ಟುವದು ನಿನ್ನಿಂದಾಗದೆಂಬುದು ನನಗೆ ಗೊತ್ತಿದೆ. ಆದರೂ ನೀನು ಮಲಗಲು ಹೋಗುವ ಪೂರ್ವದಲ್ಲಿ ನಿನಗೆ ಕೆಲವು ಉಪದೇಶದ ಮಾತುಗಳನ್ನು ಹೇಳಬೇಕೆಂದು ಮಾಡಿದ್ದೇನೆ.

ಸರಲಾ :— ಉಪದೇಶದ ಮಾತುಗಳನ್ನು! ನನಗೆ! ನೀನು?

ಶೈಲಾ :— ಹಾಂ! ಹಾಂ! ಪ್ರಿಯ ಗೆಳತಿ! ತುಸು ಇಲ್ಲಿ ಕುಳಿತುಕೋ. ನಿನ್ನ ಶೈಲಾ ಹೇಳುವದನ್ನಾದರೂ ಕೇಳು. ನೀನು ಕೇಳಲೇಬೇಕು. ಮಗು ದಯಮಾಡಿ—ಅದೇಕೆ ಸಕಲರ ಕಲ್ಯಾಣಕ್ಕಾಗಿಯಾದರೂ— ನೀನು ನಿನ್ನ ಗಂಡನ ಜೂಜಾಟವನ್ನು ತಪ್ಪಿಸಬೇಕು. ಇಲ್ಲದಿದ್ದರೆ ಅವನು ಹಾಳಾಗುವದು ಖಂಡಿತ, ಪ್ರತಿದಿನ ಅವನು ನನ್ನವರ ಕೂಡ ಇಸ್ಪೇಟು ಆಡುವನು. ಇದನ್ನೇಕೆ ನೀನು ನಿಲ್ಲಿಸಬಾರದು? ಸಂಜೆಯಲ್ಲಿ ನಮ್ಮಲ್ಲಿಗೆ ಬಂದು ಗಂಡಂದಿರನ್ನು ಹಿಡಿತದಲ್ಲಿಟ್ಟುಕೊಳ್ಳುವ ವಿದ್ಯೆಯನ್ನಾದರೂ ಕಲಿತುಕೊಂಡು ಹೋಗಬಾರದೆ?

ಸರಲಾ :— ಅದು ಶಕ್ಯವೇ?

ಶೈಲಾ :— ಏಕಲ್ಲ?

ಸರಲಾ :— ನನಗೆ ಕಲಿಸುವಿಯಾ?

ಶೈಲಾ :— ಅವಶ್ಯವಾಗಿ.

**ಸರಲಾ** :--ಶೈಲಾ, ನಾನು ನಿನಗೇನಾದರೂ ಅನ್ಯಾಯವನ್ನು ಎಂದಾದರೂ ಮಾಡಿರುವೆನೇ?

**ಶೈಲಾ** :— ಛೆ! ಛೆ! ಅಂತೆಯೆ ನಿನಗಾಗಿ ಇಷ್ಟು ಚಿಂತಿಸಿ ಏನಾದರೊಂದು ಮಾಡಬೇಕೆಂದಿದ್ದೇನೆ.

**ಸರಲಾ** :— ನಮ್ಮನ್ನು—ಗಂಡಹೆಂಡಿರನ್ನಗಲಿಸಿ—ದೇವರ ಕೃಪೆಯಿಂದ ಹೊಂದಿಕೊಂಡ ಎರಡು ಆತ್ಮಗಳನ್ನು ಬಿಡಿಸಿ ನನ್ನ ಪತಿಯನ್ನು....

**ಶೈಲಾ** :— (ಮೇಲಕ್ಕೆದ್ದು) ಅಯ್ಯೋ ದೈವವೇ, ಇದು ಕೇವಲ ಅನ್ಯಾಯ. ಜೂಜೆಂದರೆ ಗೋಪನಾಯಕನಿಗೆ ಹುಚ್ಚು. ಅದನ್ನು ನಿನಗೆ ಹೇಳಿದರೆ, ನನ್ನ ಮೇಲೆಯೇ ಹರಿಹಾಯ್ದಿಯಾ? ಸರಲಾ.

**ಸರಲಾ** :—(ಎದ್ದು) ನನ್ನಿಂದ, 'ಅವರ' ನ್ನು ದೂರ ಇಡುವ ಬುದ್ಧಿಯಾಗಲು ಕಾರಣವೇನು?

**ಶೈಲಾ** :— ಕಾರಣ! ಸತಿಪತಿಯರನ್ನಗಲಿಸಿ ನಾನು ಸಾಧಿಸುವ ಸ್ವಾರ್ಥವಾದರೂ ಏನಿದೆ! ನಿಜ. ಈ ರಾತ್ರಿ ದುರ್ಗಾ ಪೂಜೆಯಲ್ಲಿ ಅಕಸ್ಮಾತ್ತಾಗಿ ನಾನು ನಿನ್ನ ಪತಿಯ ಸಂಗಡ ನಿಂತಾಗ ಮಹಾರಾಜರು ನಮ್ಮಿಬ್ಬರನ್ನು ನೋಡಿ ಮಂದಸ್ಮಿತರಾದದ್ದೂ ಇಬ್ಬರಿಗೂ ಕೂಡಿಯೇ ಪ್ರಸಾದಕೊಟ್ಟದ್ದೂ—ಹಾಗೆ ನೋಡಿದರೆ ವಿವಾಹಿತಳಾದ ನನಗೆ ಇದು ಅಪಮಾನವೇ ಸರಿ.

**ಸರಲಾ**:— ಅದು ನನಗೆ ಹೇಗೆ ಗೊತ್ತಾಗಬೇಕು? ನಾನು ಅವರ ಹೆಂಡತಿ, ನಿಜ. ಆದರೆ ಅವರನ್ನು ನಾನು ಈಗಲೇ ಕಂಡದ್ದು.

**ಶೈಲಾ** :— ಪ್ರಿಯಳೇ, ಇದೇ ವಿಷಯವಾಗಿಯಲ್ಲವೇ ನಾನು ನಿನಗೆ ಎಚ್ಚರಿಕೆ ಕೊಟ್ಟದ್ದು!

**ಸರಲಾ** :— ಇದು ನನಗೆ ತಿಳಿಯುವುದಿಲ್ಲವೆಂದು ನೀನನ್ನುವಿಯೇನು?

**ಸೈಲಾಜಿ** :— ನನ್ನ ಪ್ರಿಯ ಗೆಳತಿ, ನಿನಗೆ ತಿಳಿದಿಲ್ಲ. ಗೋಪನಾಯಕನು ನನಗೆ ಹೀಗೇಕೆ ಮರ್ಯಾದೆ ತೋರುವನೆಂಬುದು ಗೊತ್ತಿದೆಯೇನು? ನನ್ನ ಇಚ್ಛೆಯಂತೆ ಅವನು ವರ್ತಿಸುವದು ನನಗಾಗಿ ಅಲ್ಲ. ನನ್ನ ಪತಿಯ ಸಹವಾಸ ಮತ್ತು ಆ ಇಸ್ಪೇಟಿನ ಆಟಕ್ಕಾಗಿ. ನಿನ್ನ ಪತಿಯು ಗೌರವಿಸುತ್ತಾನೆ—ನನ್ನನ್ನಲ್ಲ. ನಿನ್ನ ಶೈಲಾಜಿಯನ್ನಲ್ಲ, ಛೆ. ಎಂದೂ ಅಲ್ಲ—ಆದರೆ ಅವನು ದಲವಾಯಿ ತಿಮ್ಮನಾಯಕರ ಹೆಂಡತಿಯನ್ನು

ಗೌರವಿಸುತ್ತಾನೆ. ಏಕೆಂದರೆ ದಲವಾಯಿಯ ಕೂಡ ಅವನು ಇಸ್ಪೇ-ಟಾಡಬೇಕಾಗಿದೆ, ಇಷ್ಟೇ. ಆದುದರಿಂದ ಅವನನ್ನು ನೀನು ತಡೆಯು-ಲೇಬೇಕು. ಸರಲಾಜೀ! ಇಲ್ಲಿ ನೋಡು. ಯುವಕನನ್ನು ಲಗ್ನವಾದರೆ ನಮ್ಮ ಕೆಲಸವಾಯಿತೇ! ಅವನು ಯಾವ ಕೆಟ್ಟ ದಾರಿಯನ್ನೂ ತುಳಿಯದಂತೆ ನಿಪುಣತನದಿಂದ ನಾವು ಎಚ್ಚರದಿಂದಿರಬೇಕು. ನಾಳೆಯಾದರೂ ಚೆನ್ನಾಗಿ ಅಲಂಕಾರ ಮಾಡಿಕೊ. ಈ ದಿನವೇ ಹಾಗೆ ಶೃಂಗಾರವಾಗಿ ಬಂದಿದ್ದರೆ ನಿನ್ನನ್ನು ಬಿಟ್ಟು ನಿನ್ನ ಪತಿಯು ದುರ್ಗಾ ಪೂಜೆಯ ಸಮಾರಂಭದಲ್ಲಿ ಕಣ್ಮರೆಯಾಗುತ್ತಿರಲಿಲ್ಲ. ಎಲ್ಲಿ ಹೋದರೂ ನಿನ್ನನ್ನು ಎಳೆದುಕೊಂಡೇ ಹೋಗುತ್ತಿದ್ದನು. ದೇವಿಯಂತೆ ಶೃಂಗಾರವಾಗಿ ಹೆಂಡತಿ ಬಂದರೆ ಗಂಡಸಿಗೆ ಬಹು ಹೆಮ್ಮೆಯ ವಿಷಯ. ಚಪಲತನಬೇಕು. ಏಕೆಂದರೆ ಆರ್ಯಪುತ್ರರಕೂಡ ಜೂಜಸ್ವಾಡಿ ಗೋಪನಾಯಕನು ಯಾವಾಗಲೂ ಸೋಲುತ್ತಲೇ ಇರುವನು. ಅಂದ ಬಳಿಕ ನಿನ್ನ ಪೋಷಾಕಿಗಾಗಿ ಅವನು ದುಡ್ಡನ್ನು ಎಲ್ಲಿಂದ ತರಬೇಕು! ಹೌದಲ್ಲವೋ ನೀನೇ ನೋಡು. ಈ ಇಸ್ಪೇಟಿನಾಟದಿಂದ ಎಷ್ಟು ಅನರ್ಥಗಳುಂಟಾಗುತ್ತವೆ? ತುಸು ಯೋಚಿಸು.

**ಸರಲಾ** :— ಈಗ ಮಾತ್ರ ನೀನು ಅವರಿಬ್ಬರನ್ನೂ ಇಸ್ಪೇಟನಾಟ ಆಡಲು ಬುದ್ಧ್ಯಾಪೂರ್ವಕವಾಗಿ ಕಳಿಸಿದಿ.

**ಶೈಲಾ** :— ಅಯ್ಯೋ; ಇನ್ನೂ ನೀನು ನನಗೆ ನಿಷ್ಠುರ ನುಡಿಯುವಿಯಾ? ಇಲ್ಲಿ ಆ ಆಟ ಬೇಡವೆಂದು ನಾನು ಅವರನ್ನು ಕಳಿಸಿದೆ. ಗೆಳತೀ! ನನ್ನ ಪತಿಯು ಮನೋದೌರ್ಬಲ್ಯವುಳ್ಳವನು.—ಅವರ ಹಿಂದೆ ಕೆಟ್ಟ ಮಾತುಗಳನ್ನು ಆಡುತ್ತಿದ್ದೇನೆ. ದೇವರು ನನ್ನನ್ನು ಕ್ಷಮಿಸಬೇಕು— ಕೆಟ್ಟ ಚಟಕ್ಕೆ ಅವನ ಒಲವು ಯಾವಾಗಲೂ ಇದೆ. ಗೋಪನಾಯ-ಕನು ಬಂದು ಅವನನ್ನು ಎಳೆಯುವನು. ನೀನು ಅದನ್ನು ತಡೆಯುವದಿಲ್ಲ. ಇನ್ನು ಮೇಲಾದರೂ ಈ ಚಟವನ್ನು ಬಿಡಿಸು. ಮತ್ತು ಯುದ್ಧ ಪ್ರಾರಂಭವಾಗಿದೆ. ನಮ್ಮ ಪತಿಗಳೀರ್ವರೂ ರಣರಂಗಕ್ಕೆ ತೆರಳುವರು....ಮತ್ತು ಮರಳಿ ಬಂದರೂ ಬರಬಹುದು.

**ಸರಲಾ** :— ಶೈಲಾ! (ಆವಳನ್ನು ಅಪ್ಪಿಕೊಂಡು ಅಳುತ್ತಾಳೆ)

**ಶೈಲಾ** :— ಛೆ! ಛೆ! ಅವರು ಮರಳಿ ಬರುವರು ನಿನ್ನ— ನಿನ್ನ ಅಣ್ಣಂದಿರು ಇನ್ನೂ ವಿಜಯನಗರದಲ್ಲಿಯೇ ಇರುವರಲ್ಲವೇ ? ಶ್ರೀಯುತರಾದ ಗಣಪನಾಯಕರು.

**ಸರಲಾ** :— ಅವನೂ ಬಂದಿದ್ದಾನೆ, ಹಿಂದಿನ ಬಿಡಾರದಲ್ಲಿದ್ದಾನೆ.

**ಶೈಲಾ** :— ಗಣಪನಾಯಕರೇ ? ಹಾ ಮನಸ್ಸಿಗೆ ಬಹಳ ಸಮಾಧಾನ ವಾಯಿತು. ಪತಿಗಳು ರಣರಂಗಕ್ಕೆ ಹೋದಾಗ ನಮ್ಮಗಳ ಅಬಲೆ ಯರ, ರಕ್ಷಣೆಗೆ ಒಬ್ಬರು ಬೇಕೇಬೇಕು ನಿನ್ನ ಅಣ್ಣಂದಿರು ನಮ್ಮಲ್ಲಿ ಇರುವರು.

**ಸರಲಾ** :— ಅಣ್ಣನಿಗೆ ಇದು ಅಪಮಾನವೆಂದು ನಾನು ಭಾವಿಸುತ್ತೇನೆ.

**ಶೈಲಾ** :— ಅವರಿಗೆ ನನ್ನಿಂದ ಅವಮಾನವೇ ? ಶಕ್ಯವೇ ಇಲ್ಲ. ಅವರಲ್ಲಿ ನನಗೆ ಬಹಳ ಆದರ ಭಾವನೆ ಇದೆ.

**ಸರಲಾ** :— ಇದೇ ಪಾಳಯದಲ್ಲಿ ಅವನಿದ್ದರೂ ನಿನಗೆ ಅದು ಗೊತ್ತಿಲ್ಲ ವೆಂದ ಮೇಲೆ—

**ಶೈಲಾ** :— ಪರಕೀಯ ಗಂಡಸರ ಚಲನೆಗಳು ನಮಗೆ ಹೇಗೆ ಗೊತ್ತಾಗ ಬೇಕು ?

**ಸರಲಾ** :— ಓಹೋಹೋ ! ಪರಕೀಯ ಗಂಡಸರು !

[ ತುತೂರಿಯ ಶಬ್ದ ಕೇಳಬರುವದು ]

**ಸರಲಾ** :— (ಗಾಬರಿಯಿಂದ) ಹಾಗಾದರೆ—

**ಶೈಲಾ** :— ಹೌದು, ನಿಜ,

[ ಧಡಲ್ ಎಂದು ಬಾಗಿಲ ತೆರೆಯಲ್ಪಡುವದು ಗಣಪನಾಯಕನು ಪ್ರವೇಶಿಸುವನು. ]

**ಗಣಪ** :— ಸರಲಾ, ನಿನ್ನನ್ನು ಎಷ್ಟು ಹುಡುಕಿದೆ. ಇಲ್ಲಿ ಇರುವಿಯಾ ? (ಶೈಲಾಜಿಗೆ) ನಿಮ್ಮ ಸೇವಕ, ಶ್ರೀಮತಿ ಶೈಲಾಜಿಯವರೇ !

**ಶೈಲಾ** :— (ಮರ್ಯಾದೆಪೂರ್ವಕವಾಗಿ) ಪೂಜ್ಯ ಗಣಪನಾಯಕರೇ !

**ಗಣಪ** :— ನೀವು ತುತೂರಿಯ ಧ್ವನಿಯನ್ನು ಕೇಳಿದಿರಾ ?

**ಸರಲಾ** :— ಹೌದು !

**ಗಣಪ** :— ಈಗೊಂದು ಹತ್ತು ನಿಮಿಷಗಳ ಕೆಳಗೆ ನನಗೆ ಸುದ್ದಿ ಹತ್ತಿತು. ಪ್ರಾತಃಕಾಲದಲ್ಲಿ ರಣರಂಗಕ್ಕೆ ಅವರು ತೆರಳಬೇಕು.

**ಸರಲಾ** :— ಇದೇ ಪ್ರಾತಃಕಾಲಕ್ಕೆ! ಅಯ್ಯೋ ದೇವರೇ, ಈಗ ಅರುಣೋದಯದ ಕಾಲ ಸಮೀಪಿಸಿದೆ.

**ಗಣಪ** :— ಹೌದು. ಗೋಪನೆಲ್ಲಿರುವನು ? ವೇಳೆಯಾಯಿತು. ಅವನು—

**ಶೈಲಾ** :— ನನ್ನ ಪತಿರಾಯನ ಸಂಗಡ ಇದ್ದಾನೆ. ಅವರಿಗೂ ಗೊತ್ತಾಗಿರಬೇಕು.

**ಗಣಪ** :— ಅಹಾಹಾ! ಅವರೆಷ್ಟು ಧನ್ಯರು! ಸೈನಿಕನಿಗೆ ಸಮಾನವಾದ ದರ್ಜೆಯು ಈಗ ಯಾವುದೂ ಇಲ್ಲ. ನನಗೂ ಮನಸ್ಸಿದೆ—

**ಸರಲಾ** :— ಅಣ್ಣಾ! ಆರ್ಯಪುತ್ರರು ಹೋಗಲೇಬೇಕಲ್ಲವೇ? ಇಂದ ಮೇಲೆ ನೀನೂ ನನ್ನನ್ನು ಬಿಟ್ಟು ಹೋಗುವಿಯಾ?

**ಗಣಪ** :— ನಾನೇನು ಹೆಂಗಸೇ? ಗಂಡಸು. ವೀರನು. ಯುದ್ಧದ ವಾಸನೆಯು ನನಗೂ ಗೊತ್ತಿದೆ.

**ಸರಲಾ** :— ಅಣ್ಣಾ ನನ್ನನ್ನು ಮಾತ್ರ ಅಗಲಬೇಡ.

**ಗಣಪ** :— ಅಯ್ಯೋ ನನ್ನ ಹಣೆಯ ಬರಹವೇ! ಅಂಜುವ ಕಾರಣವೇ ಇಲ್ಲ. ಕೃಷ್ಣದೇವರಾಯನು ಇಸ್ಮಾಯಿಲ ಆದಿಲಶಹನ ಸಮಾಧೀ ಕಟ್ಟಿ ವಿಜಯನಗರಕ್ಕೆ ಹೋಗುವೆನೆಂದು ಪ್ರತಿಜ್ಞೆ ಮಾಡಿದ್ದಾನೆ. ಆಗ ನಿನ್ನನ್ನು ರಾಜಧಾನಿಗೆ ಕರೆದೊಯ್ದು ಸಭಾಮಂಟಪದಲ್ಲಿ ಕುಳ್ಳಿರಿಸುವೆನು.—ಯೋಧರ ಕಾರ್ಯಕಲಾಪಗಳು ನಿನಗೆ ಗೊತ್ತಿಲ್ಲ. ಹುಚ್ಚೀ.

**ಸರಲಾ** :— ಪತಿಯ ವಿಷಯದಲ್ಲಿ ನನಗೆ ಬಹಳೇ ಯೋಚನೆಯಾಗಿದೆ.

**ಗಣಪ** :— (ನಕ್ಕು) ಗೋಪನು ಅಚ್ಚ ಕೆಚ್ಚೆದೆಯ ಕನ್ನಡಿಗನು. ಅವನಿಗೆ ಯಾರ ಅಂಜಿಕೆ ಇದೆ! ಯವನರಿಗೆ ಅಂಜುವನೆ? ವಿಜಯ ಯಾತ್ರೆಗಾಗಿ ಸವಾರಿಮಾಡಿ ಅವನು ಹೊರಟಾಗ ನೀನು ಹೀಗೆ ಮ್ಲಾನವದನಳಾದರೆ ಮುಂದೇನು?

[ಗಣಪನಾಯಕನು ಕಿಡಿಕಿಯಲ್ಲಿ ಇಣಿಕಿನೋಡಿ ಸರಕ್ಕನೇ ಪರದೆಯನ್ನು ಎಳೆಯುವನು.]

ಸೈನಿಕರು ರಣಕ್ಕೆ ಹೋಗುತ್ತಿದ್ದಾರೆ, ಎಷ್ಟು ಉದ್ದುದ್ದ ಹೆಜ್ಜೆಗಳನ್ನು ಇಡಹತ್ತಿದ್ದಾರೆ! ಸಾವಧಾನವಾಗಿ ಹೋಗಿರಿ, ತರುಣರೇ ಸಾವಧಾನ ವಾಗಿ—ಥೂ ಮಹಾರಾಜರು, ಸರಲಾ, ಸ್ವತಃ ಮಹಾರಾಜರೂ ಸಾಗಿದ್ದಾರೆ. (ನಮಸ್ಕರಿಸುವನು)

(ಶೈಲಾಜಿಯು ಕಿಡಿಕಿಯಲ್ಲಿ ಇಣಿಕಿ ನೋಡಿ ನಮಸ್ಕರಿಸುವಳು)

ಅಯ್ಯೋ, ನನ್ನಂಥವನಿಗೆ ಕಠಿಣ ಪರಿಸ್ಥಿತಿ ಬಂದಿತು. ನಾನು ಹೀಗೆ ಹಿಂದುಳಿದುಕೊಳ್ಳುವದು ಅಯೋಗ್ಯವು. (ಬಾಗಿಲಿಗೆ ಬರುವನು.)

**ಶೈಲಾ** :— ಓಹೋ, ನೀವು ಪುರುಷರು! ಸ್ವಂತ ಸುಖವನ್ನೇ ನೋಡುವಿರಿ.

**ಗಣಪ** :— ಶೈಲಾಜಿಯುವರೇ, 'ಹಿಂದುಳಿಯುವದು ಅಯೋಗ್ಯವು. ಎಂದರೆ 'ಹೋಗೇ ತೀರುವೆನು' ಎಂದರ್ಥವಾಗುವದಿಲ್ಲ.

**ಶೈಲಾ** :— ದಲವಾಯಿಗಳೆ, ನೀವು ಬಹಳ ಉದಾತ್ತ ವಿಚಾರಿಗಳು. ಆದರೆ ಅಬಲೆಯನ್ನು ರಕ್ಷಿಸಲು ದೀಕ್ಷಾಬದ್ಧರಾಗುವದು ಸಹ ಬಹಳ ಉದಾತ್ತ ವಾದ ಕಾರ್ಯವಲ್ಲವೇ ?

**ಗಣಪ** :— ಸರಿ. ಬಹಳ ಯೋಗ್ಯವಾದುದು. ನನ್ನ ಮನಸ್ಸು ಹರಿದಂತೆ ಸಾಗುವದು ಉಚಿತವಲ್ಲ. ನನ್ನ ತಂಗಿಯನ್ನು ನಾನು ರಕ್ಷಿಸಬೇಕಾಗಿದೆ.

**ಶೈಲಾ** :— ಹೌದು ಮತ್ತು....ನಾವು ಈ ಪಾಳಯ ಬಿಟ್ಟು ಓಡಿಹೋಗುವ ಪ್ರಸಂಗ ಬಂದರೆ, ನಿಮ್ಮ ರಥದಲ್ಲಿ ನನಗೆ ತುಸು ಸ್ಥಳವನ್ನು ಕೊಡು ವಿರೆಂದು ನಾನು ಆಶಿಸಲೇನು ?

**ಗಣಪ** :— ಅಂ! ಪಾಳಯ ಬಿಡುವ ಪ್ರಸಂಗ!

**ಸರಲಾ** :— ಅಯ್ಯೋ!

**ಗಣಪ** :— (ಗಾಂಭೀರ್ಯದಿಂದ) ಆಗಬಹುದು. ಈ ಅಸಂಭವನೀಯ ವಾದ ಮತ್ತು ಭಯಂಕರವಾದ ಮಾತು ಜರುಗಿದ ಪಕ್ಷದಲ್ಲಿ ನಮ್ಮ ರಥದಲ್ಲಿ ನಿಮ್ಮನ್ನು ಅವಶ್ಯವಾಗಿ ಕರೆದೊಯ್ಯುವೆನು. (ಶೈಲಾಜಿಯು ಆನಂದದಿಂದ ಉಸುರ್ಗರೆಯುವಳು) ಆದರೆ ಅದು ಜರುಗೀತೆಂದು ಕನಸಿನಲ್ಲಿ ನೆನೆಯುವದು ಕೂಡ ಸಂಕಟಕಾರಕವು. ಭಯಂಕರವು. ಶೈಲಾಜಿಯವರೇ, ನಾನನ್ನುವದು ನಿಮಗೆ ಕೇಳಿಸಿತೇನು? ಇದು ಕನ್ನಡಿಗರಿಗೆ, ಹಿಂದುಗಳಿಗೆ, ಭೂಷಣವಲ್ಲ.

(ಗಂಭೀರವಾಗಿ ಗೋಪನಾಯಕನೂ, ತಿಮ್ಮನಾಯಕನೂ ಪ್ರವೇಶಿಸುತ್ತಾರೆ)

ತಿಮ್ಮ :— ಏನದು ಗಣಪನಾಯಕರೆ?

ಗಣಪ :— (ಶೈಲಾಜಿಯ ಕಡೆಗೊಮ್ಮೆ ನೋಡಿ) ಏನಿಲ್ಲ ದಳವಾಯಿಗಳೇ, ತಮ್ಮಂಥ ಸದ್ಗೃಹಸ್ಥರೆದುರು ಬರುವಂಥ ವಿಷಯವೇ ಅಲ್ಲವದು

ಸರಲಾ :— ಆರ್ಯಪುತ್ರರೇ!

ಗೋಪ :— ಸರಲಾ, ಬಾ, ನಾನು ಪೋಷಾಕು ಕೊಡಬೇಕು. ತಂದೆಗೆ ಪತ್ರ ಬರೆದು ಕಳಿಸಬೇಕು. ಮತ್ತು ನೀನು --

ಸರಲಾ :— ಮತ್ತು ನಾನು, ದೇವರನ್ನು ಪ್ರಾರ್ಥಿಸುವೆನು, ನಿಮಗೆ ಜಯ ದೊರಕಲೆಂದು.

ತಿಮ್ಮ :— (ಮರ್ಯಾದೆಪೂರ್ವಕವಾಗಿ, ಪ್ರಾರ್ಥಿಸುವಾಗಲೇ ಅವನಿಗೆ ತುಸು ಫಲಾಹಾರವನ್ನು ತಯಾರಿಸಿ ಕಟ್ಟಿ ಕೊಡಿರಿ.

ಶೈಲಾ :— ಒಳ್ಳೇ ಸೂಚನೆ ಇದು.

(ಗೋಪನಾಯಕ ಸರಲಾಜಿಯವರು ಹೋಗುವರು. ಗಣಪನಾಯಕನು ಅವರನ್ನು ಹಿಂಬಾಲಿಸಲು ಹಿಂಜರಿಯುವನು.)

ಗಣಪ :— (ತಿಮ್ಮ ನಾಯಕನಿಗೆ) ಹೋಗಿ ಬನ್ನಿರಿ ಜಯವಾಗಲಿ (ನಮಸ್ಕರಿ-ಸುವನು)

ತಿಮ್ಮ :— (ನಮಸ್ಕರಿಸಿ) ಆಗಲಿ! (ಗೋಪನಾಯಕನು ಹೋಗುವನು) ಆನೆ, ಆನೆ ಬೆಳೆದಂತೆ ಬೆಳೆದಿದ್ದಾನೆ.

ಶೈಲಾ :— ಅಲ್ಲವೇ!....ಗೋಪನಿಂದ ಏನಾದರೂ ವ್ಯವಸ್ಥೆ ಮಾಡಲಾಯಿತೇನು?

ತಿಮ್ಮ :— ಎರಡು ನೂರು.

ಶೈಲಾ :— ಬೇಶ್

ತಿಮ್ಮ :— ಹುಚ್ಚನಂತೆ ಆಡಿದ....ನಿನ್ನ ಸಲುವಾಗಿಯೇ ಯೋಚಿಸುತ್ತಿದ್ದೆ.

ಶೈಲಾ :— ನನ್ನ ಸಲುವಾಗಿ!

ತಿಮ್ಮ :— (ವರಹಗಳನ್ನು ಕೊಡುತ್ತ) ಅವುಗಳನ್ನು ನೀನು ಈಗಲೇ ತೆಗೆದು ಕೊಂಡು ಬಿಡು

ಶೈಲಾ :— ಆದರ

**ತಿಮ್ಮ** :— ಪ್ರಿಯಳೇ, ನಾವು ರಣಕ್ಕೆ ತೆರಳಲೇಬೇಕು. ಗುಂಡಿನ ಹೊಡತಕ್ಕೆ ನಿಲ್ಲಬೇಕು.

**ಶೈಲಾ** :— ಅವ್ವಯ್ಯಾ!

**ತಿಮ್ಮ** :— ಹಾಂ ಹಾಂ!.... ಒಂದುವೇಳೆ ನಾನು ಬಿದ್ದರೆ,

**ಶೈಲಾ** :— ಛೀ, ಅದೆಂದೂ ಶಕ್ಯವಿಲ್ಲ.

**ತಿಮ್ಮ** :— ಇಲ್ಲಿ ನೋಡು; ನಾನು ಹೊರಡುವ ಪೂರ್ವದಲ್ಲಿ ನಿನಗೆ ಕೆಲವೊಂದು ಮಾತುಗಳನ್ನು ಹೇಳಬೇಕೆಂದಿದ್ದೇನೆ. ನಿನ್ನಿಂದ ನನ್ನ ಜೀವನವೇ ಬದಲಾಗಿದೆ. ವಿವಾಹದ ಪೂರ್ವದಲ್ಲಿ ನಾನೆಂದೂ ಇಷ್ಟು ಸುಖದಿಂದಿರಲಿಲ್ಲ. ಪೋಲಿಯಂತೆ ಓಡಾಡುತ್ತಿದ್ದೆ. ಕುಡಿಯುತ್ತಿದ್ದೆ. ಸಿಕ್ಕಲ್ಲಿ ವೇಳೆ ಕಳೆಯುತ್ತಿದ್ದೆ. ಜೂಜಾಡುವದೂ, ಬೇಟೆಯಾಡುವದೂ....ಈಗ ಹೇಳಿದರೆ ಭಯವಿಲ್ಲ, ಹೆಂಗಸನ್ನೂ ಇಟ್ಟಿದ್ದೆನು. ಆ ಮೇಲೆ ನಿನ್ನನ್ನು ಲಗ್ನವಾದೆ. ಶೈಲಾ, ನನ್ನ ಹಿಂದಿನ ಎಲ್ಲ ಚಟಗಳೂ ತಮ್ಮಿಂದ ತಾವೇ ಮಾಯವಾದವು. ಅದಕ್ಕೆಲ್ಲ ನೀನೇ ಕಾರಣಳು. ವಿವಾಹ ಜೀವನವನ್ನು ನಿನ್ನ ಕೂಡ ಬಹಳ ಸುಖದಿಂದ ಕಳೆದೆನು. ಈಗ ರಣಭೂಮಿಗೆ ತೆರಳುತ್ತಿದ್ದೇನೆ. ಈ ಪೂರ್ವದಲ್ಲಿ ನಿನಗಾಗಿ ತುಸು ವ್ಯವಸ್ಥೆ ಮಾಡಿದ್ದೇನೆ.

**ಶೈಲಾ** :— ವ್ಯವಸ್ಥೆ ಮಾಡುವ ಕಾರಣವಿಲ್ಲ. ನೀವು ಮರಳಿ ಬರುವಿರಿ. ನನಗೆ ಪೂರ್ಣ ವಿಶ್ವಾಸವಿದೆ.

**ತಿಮ್ಮ** :— ಆಗಲಿ, ನಿನ್ನ ದೈವ ಹೇಗಿದೆಯೋ ನೋಡೋಣ. (ಲೋಡಿಗಾತು ಕೂಡುತ್ತ್ರವನು) ಗೋಪನಿಂದ ಗೆದ್ದ ೨೦೦ ನಿನ್ನಲ್ಲಿವೆ. ಈ ಹಮ್ಮಿಣಿಯನ್ನು ತೆಗೆದುಕೊ. ಶೈಲಾ, ನಾನು ಗುಂಡಿನೇಟಿಗೆ ತುತ್ತಾದರೆ, ನಿನಗೆ ಗೊತ್ತಿದೆ, ಉತ್ತರ ಕರ್ಮದ ಖರ್ಚು ನಿನ್ನ ತಲೆಯಮೇಲಿಲ್ಲ. (ಶೈಲಾಜಿಯು ಅಳಹತ್ತುವಳು) ಅಳಬೇಡ ನನ್ನ ಅರಗಿಣಿಯೇ, ನಾನು ಮರಳಿ ಬರುವೆನು ಆಯಿತಿಲ್ಲವೋ? ಇನ್ನು ಕುದುರೆಗಳು, ಕುದುರೆಯ ಲಾಯದ ಬೀಗದ ಕೈ ತೆಗೆದುಕೋ, ಅಲ್ಲಿ ಎರಡು ಕುದುರೆಗಳಿವೆ. ಜಾತಿಯ ಕುದುರೆಗಳವು, ಒಂದೊಂದಕ್ಕೆ ಎರಡು ನೂರರಂತೆ ಕಿಮ್ಮತ್ತು ಬರಬಹುದು. ಉಂಗುರಗಳು, ನಡುಕಟ್ಟು, ಪೋಚೆ,

ಕೊರಳೊಳಗಿನ ಹಾರಗಳು, ಎಲ್ಲವನ್ನೂ ಇಲ್ಲಿ ಬಿಟ್ಟು ಹೋಗುವೆನು ಪ್ರಿಯಳೇ, ಇಷ್ಟೆ ನನ್ನ ಆಸ್ತಿ........(ಎದ್ದು ಮೇಲೆ ನೋಡಿ) ಓಹೋ ತಡವಾಯಿತು.

**ಶೈಲಾ :—** ತುಸು ಉಪಹಾರ ಕಟ್ಟಿಕೊಡುವೆನು.

**ತಿಮ್ಮ :—** ಉಪಹಾರವನ್ನು ಕಟ್ಟಲು (ಸರಲಾಜಿಯು ಹೋದ ದಿಕ್ಕಿಗೆ ತಲೆ ಮಾಡಿ) ಆ ಹುಚ್ಚಿಗೆ ಹೇಳಿರುವೆನಲ್ಲಾ!

**ಶೈಲಾ :—** ಹೌದೇನು ಆರ್ಯಪುತ್ರಾ!

**ತಿಮ್ಮ :—** ಶೈಲಾ, ರಣದಲ್ಲಿ ಯುದ್ಧ ಮಾಡುವಾಗ ಬಿದ್ದರೆ ನಿನ್ನ ಮಧುರ ಗಾನದ ನಿನಾದವನ್ನು ನೆನೆಯುತ್ತ ಪ್ರಾಣಬಿಡಬೇಕೆಂದಿದ್ದೇನೆ. ಅದ-ಕಾಗಿ ಒಂದು ಪದವನ್ನು ಅನ್ನುವಿಯಾ? ಈಚೆಯ ಕೋಣೆಯಲ್ಲಿ ನಾನು ಪೋಷಾಕನ್ನು ತೊಡುತ್ತಿರುವೆನು. ಅದರ ಬಾಗಿಲನ್ನೂ ತೆರೆದು ಇಡುವೆನು. ಅಂದರೆ ನೀನೂ ಕಾಣುವಿ.

**ಶೈಲಾ :—** (ದುಃಖವನ್ನು ಹತ್ತಿಕ್ಕಿ) ಆಗಲಿ!

[ತಿಮ್ಮನಾಯಕನು ಅವಳ ಎರಡೂ ರಟ್ಟೆಗಳನ್ನು ಹಿಡಿದು ಹಿಡಿದು ಬಹಳ ಅಂತಃಕರಣದಿಂದ ನೋಡುವನು. ತೆರಳುವನು; ಕೋಣೆಯ ಬಾಗಿಲನ್ನು ತೆರೆದಿಡುವನು. ಶೈಲಾಜಿಯು ವೀಣೆಯನ್ನು ತೆಗೆದುಕೊಂಡು ವಿರಹ ಗೀತೆಯೊಂದನ್ನು ಬಾರಿಸುವಳು. ಬಾರಿಸುತ್ತಿರುವಾಗಲೇ ಕಂಠಬಿಗಿದು ದುಃಖಿತಳಾಗಿ ಲೋಡಿನ ಮೇಲೆ ಬೀಳುವಳು. ಮತ್ತೆ ಸುಧಾರಿಸಿಕೊಂಡು ಎದ್ದು ಒಂದು ಗಾನಾಲಾಪವನ್ನು ಮಾಡುವಳು.]

**ತಿಮ್ಮ :—** (ರಣಕ್ಕೆ ಹೋಗುವ ವೇಷದಲ್ಲಿ ಬರುವನು) ಇನ್ನು ವೇಳೆ ಇಲ್ಲ. ಶೈಲಾ, ನೀನು ಬಹು ವಿಲಕ್ಷಣವಾದ ಹುಡುಗಿ. (ಅಪ್ಪಿ ಹೊರಟು ಹೋಗುವನು)

**ಶೈಲಾ :—** ಆರ್ಯಪುತ್ರಾ! (ಅವನು ಹೋದ ಬಾಗಿಲ ಕಡೆಗೆ ನೋಡುವಳು. ಆ ಮೇಲೆ ತನ್ನನ್ನು ನೋಡಿಕೊಳ್ಳುವಳು) ಆದರೆ ನಾನು....ನಾನಿನ್ನೂ ದುರ್ಗಾ ಪೂಜೆಯ ಉಡುಪಿನಲ್ಲಿಯೇ ಇರುವೆನಲ್ಲ! (ಪೋಷಾಕನ್ನು ಬಿಚ್ಚುತ್ತ ಹೋಗುವಳು.)

ರಣವಾದ್ಯಗಳು ಕೇಳಬರುವವು.

**ಪರದೆ**

## ಎರಡನೆಯ ಪ್ರವೇಶ

ಅದೇ ರಂಗಭೂಮಿ. ಕಿಡಿಕಿಗಳಿಗೆಲ್ಲ ಮುಸುಕು ಹಾಕಿದೆ. ರಂಗಭೂಮಿಯ ನಡುವೆ ಒಂದು ತಾಟನ್ನು ಮಾತ್ರ ಹೆಚ್ಚಾಗಿ ಇಟ್ಟಿದೆ. ಕ್ರಿ. ಶ. ೧೫೬೦ ನೇ ತಾರೀಖು ಸಂಜೆ. ಗಣಪನಾಯಕನು ಮತ್ತು ಸರಲಾಜಿಯವರು ಪ್ರವೇಶಿಸುವರು. ಗಣಪ ನಾಯಕನು ಗಾಬರಿಯಾದಂತಿದ್ದಾನೆ. ಸೈನಿಕನಂತೆ ನಿಲುವಂಗಿಯನ್ನು ತೊಟ್ಟಿದ್ದಾನೆ.

**ಸರಲಾ** :— ಅಣ್ಣಾ, ಶೈಲಾ ಇಲ್ಲಿ ಇಲ್ಲವಲ್ಲ!

( ಹೊರಡುವವಳಂತೆ ಬಾಗಿಲ ಕಡೆಗೆ ತಿರುಗುವಳು. )

**ಗಣಪ** :— ಥೂ, ಸರಲಾ! ಔತಣವನ್ನು ಸ್ವೀಕರಿಸಿರುವಿಯೆಂದಮೇಲೆ.

**ಸರಲಾ** :— ಸ್ವೀಕರಿಸಿದವನು ನೀನು.

**ಗಣಪ** :— ನಾನೇ, ಆಗಲಿ. ಈಗ ನಾನು ನಿನ್ನ ರಕ್ಷಕನಾಗಿದ್ದೇನೆ. ಮೇಲಾಗಿ ಶೈಲಾಜಿಯ ಕೂಡ ಊಟ ಮಾಡಲು ನಾನು ಬಯಸುವೆನೆ?

**ಸರಲಾ** :— ಅಂದಮೇಲೆ?

**ಗಣಪ** :— ನನ್ನ ಹೊಟ್ಟೆ ಹಸಿದಿದೆ. ಸೈನಿಕರು ತೆರಳಿದಂದಿನಿಂದ ನಾನು ಚನ್ನಾಗಿ ಊಟವನ್ನೇ ಮಾಡಿಲ್ಲ.

[ ಸರಲಾಜಿಯು ಕರವಸ್ತ್ರದಿಂದ ಕಣ್ಣುಗಳನ್ನು ಒರೆಸಿಕೊಳ್ಳುವಳು. ]

**ಗಣಪ** :— ಅಯ್ಯೋ ದೇವರೆ, ಮತ್ತೆ ಕಣ್ಣೀರೆ? ಸೈನಿಕರ ಗಮನವನ್ನು ನೆನಪಿಗೆ ತಂದುಕೊಟ್ಟದ್ದು ನನ್ನದೇ ಮೂರ್ಖತನ. ಆದರೆ ಶೈಲಾಜಿಯಂತೆ ನೀನೂ ಏಕೆ ಗಟ್ಟಿಗಳಾಗಬಾರದು?

**ಸರಲಾ** :— ಅಣ್ಣಾ, ಹಾಗೆ ಆಗಲು ನಾನು ಪ್ರಯತ್ನಿಸುವೆನು.

**ಗಣಪ** :— ಹಾಗೆ ನೀನು ಆಗಲೇ ಬೇಕು. ನನಗೆ ಇನ್ನೂ ಬಹಳ ಕೆಲಸಗಳಿವೆ. ಈ ಹಳ್ಳಿಯ ಜನಗಳು ಅಂಜಿದ ಕುರಿಗಳಂತೆ ಧಡಪಡಿಸುತ್ತಿರುವರು. ಅವರನ್ನು ಶಾಂತಮಾಡಬೇಕಾಗಿದೆ. ಯುದ್ಧ ಬೇಕು ಆ ಪಾಳಯದಲ್ಲಿ ಶಾಂತತೆಯನ್ನು ಕಾಯುವದು ಬೇಡ, ಇಷ್ಟು ಅನಿಸಿ ಬಿಟ್ಟಿದೆ. (ತಾಟನ್ನು ನೋಡುತ್ತ)....ಹೊಟ್ಟೆ ಬಹಳ ಹಸಿಯಿತು; ಶೈಲಾಜಿಯಿದ್ದರೆ ಊಟದ ವ್ಯವಸ್ಥೆ ಮಾಡುತ್ತಿದ್ದಳು.

**ಸರಲಾ** :— ಅವಳು ಅವಳು, ಅಷ್ಟು ಜಾಣಾಕ್ಷಳಿರುವಳು. ಸಂಶಯವಿಲ್ಲ.

ಗಣಪ :— ಥೂ, ನನಗೆ ಊಟ ಸಿಕ್ಕರೆ ಸಾಕು. ಹಸಿದು ಕಂಗಾಲಾಗಿದ್ದೇನೆ. ಶೈಲಾಜ ಎಲ್ಲಿ?

[ಶೈಲಾಜೆಯು ಪ್ರವೇಶಿಸುವಳು. ಸರಲಾಜೆಯೆಡೆಗೆ ಓಡಿ ಸ್ನೇಹದಿಂದ ಅಪ್ಪುವಳು.]

ಶೈಲಾ :— ಪ್ರಿಯ ಸರಲಾ....ಓಹೋ ನಾಯಕರು....ನಿಮ್ಮ ನಿಲುವಂಗಿ?

ಗಣಪ :— ನನ್ನ ನಿಲುವಂಗಿ ಶೈಲಾಜೆಯವರೇ! ಇದು ಬಹಳ ಚೆನ್ನಾಗಿದೆ.

ಶೈಲಾ :— ರಣಕ್ಕೆ ಹೋಗುವಾಗ ತೊಡುವ ಅಂಗಿ ಇದು. ನಿಮ್ಮ ಮೀಸೆಯಂತೆ ಇದು ಸಹ ಬಹಳ ಭಯಂಕರವಾಗಿರುವದು.

ಗಣಪ :— ಸದ್ಯಕ್ಕೆ ನೀವೇನು ಅಂಜುವ ಕಾರಣವಿಲ್ಲ.

ಶೈಲಾ :— ಆದರೆ ನನಗೆ ಅಂಜಿಕೆ ಬರತೊಡಗಿದೆ. ನೀವು ಸೈನ್ಯದಲ್ಲಿ ಸೇರಿ ನಮ್ಮನ್ನು ನಮ್ಮ ಪಾಡಿಗೆ ಬಿಡುವಿರೆಂದು ನಾನು ಊಹಿಸಿದೆನು.

ಗಣಪ :— ಛೆ! ಛೆ!

ಶೈಲಾ :— ಇರಲಿ ನನಗೆಲ್ಲ ಗೊತ್ತಿದೆ, ರಣಕುಂಡದಲ್ಲಿ ಜಿಗಿದು, ವೀರಾವೇಶದಿಂದ ನಾಟ್ಯವಾಡಬೇಕೆನ್ನುವಿರಿ.

ಗಣಪ :— (ಮೀಸೆ ತೀಡುತ್ತ) ಅದು ಪೌರುಷದ ಲಕ್ಷಣ. ಆದರೆ ಕರ್ತವ್ಯಕ್ಕೆ ನಾನಿಲ್ಲಿ ಕಟ್ಟು ಬಿದ್ದಿದ್ದೇನೆ.

ಸರಲಾ :— ನಾನು ಪಾರಾದೆ. ನೀನು ನಮ್ಮಲ್ಲಿರುವದು ಬಹಳ ಅಗತ್ಯವಿರುವಾಗ ನಮ್ಮನ್ನು ಬಿಟ್ಟು ಹೋಗುವಿಯೆಂದು ಅಂಜಿದ್ದೆನು.

ಗಣಪ :— ಅಗತ್ಯ?

ಶೈಲಾ :— (ಗಟ್ಟಿ ಸ್ವರದಲ್ಲಿ) ಯಾರಿರುವಿರಿ?

ಗಣಪ :— ಅಂ!

ಶೈಲಾ :— ಯಾರೂ ಇದ್ದಂತೆ ತೋರುವುದಿಲ್ಲ. ಒಬ್ಬರೂ ಬರಲೊಲ್ಲರು. (ಮತ್ತೆ ಕೂಗುವಳು; ಯಾರೂ ಬರುವದಿಲ್ಲ.)

ಗಣಪ :— ಅಂದರೆ, ಆಳುಗಳೆಲ್ಲ....

ಶೈಲಾ :— ಮೋಸಗಾರರು, ಸುದ್ದಿಗಾಗಿ ಓಡಿದರು. ಅತಿಥಿಗಳನ್ನು ಕರೆದ ನನಗೆ ಇದೆಷ್ಟು ಅಸಹ್ಯ!

ಗಣಪ :— ಊಟವಿಲ್ಲ?

ಶೈಲಾ :— ಹುಂ ಹುಂ !

ಗಣಪ :— ಅಯ್ಯೋ ನನ್ನ ಹಣೇಬರವೇ!

ಶೈಲಾ :— ಅಂಗಡಿಗಳು ತೆರೆದಿವೆ. ಗಣಪನಾಯಕರೇ, ನಾನು ಅಬಲೆ. ಏನು ಮಾಡಬಲ್ಲೆ ; ಗದ್ದಲದಿಂದ ತುಂಬಿದ ಈ ಮುಲ್ಲಾಬಂಡಿಯ ಓಣಿಯಲ್ಲಿ ನಾನು ಹೋಗಲಾರೆ. ನಾವು ವಿವಾಹಿತರು, ಅಬಲೆಯರು, ಕಣ್ಣೀರು ಸುರಿಸಿ ಕುಡಿಯಬೇಕೆ? (ಕಿಟಕಿಯ ಕಡೆಗೆ ಹೋಗುವಳು)— ಆದರೆ ನೀವು ಪುರುಷರು.

ಗಣಪ :— ಹೌದು, ನಾನು ಹೋಗಿ ಏನಾದರೂ ದೊರಕಿಸುವೆನು.

ಶೈಲಾ :— ಆಹಾಹಾ! ಗಂಡುಸಾಗಿ ಹುಟ್ಟಲು ಪಡೆದು ಬರಬೇಕು.... ಶ್ರೀಖಂಡ ಪುರಿ....ಅಥವಾ ಚಹೋಟೆ ಸಿಕ್ಕರೂ ನಡೆದೀತು.

ಗಣಪ :— ಶ್ರೀಖಂಡವೇ? (ನಕ್ಕು) ಕಷ್ಟ! ಮುಂದಕ್ಕೆ ಸಿಕ್ಕರೆ ನಿಮ್ಮ ಪುಣ್ಯ.

ಶೈಲಾ :— (ಅದೇ ಗುಂಗಿನಲ್ಲಿ) ಮತ್ತೇನಾದರೂ ಸಿಕ್ಕರೆ ನೋಡಿರಿ.

[ಗಣಪನಾಯಕನು ಹೊರಡುವನು ಶೈಲಾಜಿಯು ಬಾಗಿಲವನ್ನು ಮುಚ್ಚುವಳು.]

ಸರಲಾ :— ಶೈಲಾ!

ಶೈಲಾ :— ಹಾಂ ಹಾಂ, ಧಾವಿಸಬೇಕು. ಹಸಿದವರಿಗೆ ಅಶನಾದಿಗಳನ್ನು ನೀಡಲು ಗೋಪನಾಯಕರಿರುವರು.

ಸರಲಾ :— ಅದಕ್ಕಾಗಿಯೇ ಔತನದ ನೆವವನ್ನಿಟ್ಟು ನಮ್ಮನ್ನಿಲ್ಲಿ ಕರೆಸಿದಿಯೇನು!

ಶೈಲಾ :— ಗಂಡಸರು ನಮ್ಮ ತುಷ್ಟಿಗಾಗಿ ಹಾತೊರೆಯುತ್ತಿರುವಾಗ, ನನ್ನ ಮುದ್ದು ಗೆಳತೀ, ಅವರಿಗೆ ಅವಕಾಶವನ್ನು ಕಲ್ಪಿಸಿಕೊಡುವದು ನಮ್ಮಂಥವರ, ಹೆಂಗಳೆಯ ಕರ್ತವ್ಯವು.

ಸರಲಾ :— ಹೆಂಗಳೆಯರ ಕರ್ತವ್ಯ! ಅಂತೂ ನೀನು ಒಪ್ಪಿಕೊಂಡಿ ಅವನ ಸೇವೆಯನ್ನು!

ಶೈಲಾ :— ಹಾಗಾದರೆ ಸರಲಾ, ನಮ್ಮ ಪತಿಗಳಿಗೆ ನಾವು ಸುಳ್ಳಾಗಬೇಕೇನು?

ಸರಲಾ :— ಅಂದರೆ?

**ಶೈಲಾ :—** ಶಾರ್ದೂಲನಂತಿರುವ ಗಣಪನಾಯಕರ ಬಳಿಯಲ್ಲಿ ನಾವು ಸುರಕ್ಷಿತವಾಗಿರುವೆವೆಂದು ನಂಬಿ ನಿಶ್ಚಿಂತರಾಗಿ ನಮ್ಮ ಪತಿಗಳು ರಣಕ್ಕೆ ಹೋಗಲಿಲ್ಲವೇ? ಸರಲಾ, ನಿನಗೆ ತಾಯಿ ತಂದೆಗಳಿರುವರು. ಅಣ್ಣನಿರುವನು. ನನ್ನಂಥ ಅನಾಥಳ ಗತಿಯನ್ನು ನೀನು ತಿಳಿಯಲು ಶಕ್ಯವಿಲ್ಲ. ಇಂಥವಳಿಗೆ ನಾಯಕರು ಏನೋ ತುಸು ಉಪಕಾರ ಮಾಡಹೋದರೆ ನೀನು ಸಹಿಸಲಾರೆಯಾ!

**ಸರಲಾ :—** ಯಾವಾಗಲೂ ನೀನು ನನ್ನನ್ನೇ ದೂಷಿಸುವಿ.

**ಶೈಲಾ :—** ಪ್ರಿಯ ಗೆಳತೀ, ಮೊದಲು ನೀನು ತಪ್ಪು ಮಾಡುವಿ. ಆಮೇಲೆ ಹೆರವರು ನಿಷ್ಠುರ ಮಾತಾಡುವರೆಂದು ಆರೋಪಿಸುವಿ

**ಸರಲಾ :—** ಸರಿ!

(ಶೈಲಾಜಿಯು ನೀರಿನ ಪಾತ್ರೆಯಿಂದ ತುಸು ನೀರು ತೆಗೆಯುವಳು. ತೋಫಿನ ಗರ್ಜನೆಯು ಕೇಳಬರುವದು.)

**ಸರಲಾ :—** ಏನದು?

**ಶೈಲಾ :—** ಗುಂಡಿನ ಸಪ್ಪಳ (ಕುಡಿಯುವಳು)

**ಸರಲಾ :—** ದೇವರೇ ನೀನೇ ಕಾಪಾಡು. ಇದು ತೋಫು. (ಕಿಡಕಿಯ ಕಡೆಗೆ ಓಡುವಳು).

**ಶೈಲಾ :—** (ಶಾಂತರೀತಿಯಿಂದ ತಿರುಗಾಡುತ್ತ) ಸನಿಯಕ್ಕೆ ಬಂದರು. ಮೊದಲಿಗಿಂತಲೂ ಸಮೀಪಕ್ಕೆ ಬಂದರು.

(ಗಣಪನಾಯಕನು ಗಡಬಡಿಯಿಂದ ಬರುವನು. ಒಂದು ಕೈಯ್ಯಲ್ಲಿ ಕಡ್ಲಿ ಮಂಡಕ್ಕಿ ಪುಡುಕೆಯನ್ನೂ ಮತ್ತೊಂದು ಕೈಯಲ್ಲಿ ಮಂಡಕ್ಕಿ ಉಂಡೆಯ ಗಂಟನ್ನೂ ಹಿಡಿದಿರುವನು. ಆವೆರಡನ್ನೂ ತಾಟನಲ್ಲಿಡುವನು. ಶೈಲಾಜಿಯು ಬಂದು ರಂಗಭೂಮಿಗೆ ಎದುರಾಗಿ ಕುಳಿತು ಸಾವಕಾಶವಾಗಿ ತಿನ್ನತೊಡಗುವಳು.)

ಈ ನಿಮ್ಮ ಉಪಕಾರವನ್ನು ನಾನು ಎಂದೂ ಮರೆಯುವದಿಲ್ಲ ಗಣಪನಾಯಕರೇ.

**ಗಣಪ :—** ನನ್ನ ಉಪಕಾರ! ದೇವರೇ ಗತಿ. ಶೈಲಾಜಿಯವರೇ, ಅಂಗಡಿಯ ಸುದ್ದೀ ನೀವು ಕೇಳಿದಂತೆ ಕಾಣಲಿಲ್ಲ.

**ಸರಲಾ** :— (ಕಿಡಿಕಿಯಿಂದ ಬಂದು) ಸುದ್ದಿ? ಅಣ್ಣಾ ಯಾವ ಸುದ್ದಿ?

**ಗಣಪ** :— ಮೊದಲು ನನ್ನ ಮೈಮೇಲಿನ ಅಂಗಿಯನ್ನು ತೆಗೆ.

**ಸರಲಾ**.:— ನಿನ್ನ ನಿಲುವಂಗಿ!

**ಗಣಪ** :— ಹೇಸಿ ಇದು. ನಾನು ಸೈನಿಕನಂತೆ ಕಾಣುವೆ (ತಾನೇ ತೆಗೆ, ದೊಗೆಯುವನು.)

**ಶೈಲಾ** :— ಒಳ್ಳೇದಾಯಿತು. ನಿಮ್ಮ ಪರಿಚಯವಿಲ್ಲದವರು ಈ ನಿಲುವಂಗಿಯನ್ನೂ ನಿಮ್ಮ ಆ ಗಡುತರವಾದ ಮೀಶೆಯನ್ನೂ ನೋಡಿ ನೀವು ಸೈನಿಕರಿರಬಹುದೆಂದು ತಿಳಿಯುವರು.

**ಗಣಪ**:— ಒಂದು ಹಿಂದೂ ಪಿಳ್ಳೆಯನ್ನು ಕೂಡ ಉಳಿಸುವದಿಲ್ಲವೆಂದು ಯವನರು ಆಣೆ ಮಾಡಿದ್ದಾರೆ.

**ಶೈಲಾ** :— ಹಾಗಾದರೆ ಒಂದು ಯುಕ್ತಿ ಹೇಳುವೆನು. ಒಂದು ಶಾಲನ್ನು ಹೊದೆದುಕೊಳ್ಳಿರಿ.

**ಗಣಪ** :— ಓ! ಏನು ಬುದ್ಧಿ, ಏನು ಬುದ್ಧಿ, ಪಾರಾದೆ, ಒಳ್ಳೇ ಪಾರಾದೆ.

**ಸರಲಾ** :— ಏತರಿಂದ ಪಾರಾದಿ? ಸುದ್ದಿ ಏನು?

**ಗಣಪ** :— ಮುತ್ತಿಗೆಯಿಂದ ಒಬ್ಬನು ಪಾರಾಗಿ ಬಂದಿದ್ದಾನೆ. ಆ ಮುಂಡಕ್ಕೇ ಅಂಗಡಿಯಲ್ಲಿ ಕುಳಿತಿದ್ದಾನೆ. ಅವನ ಗುಂಪಿನಲ್ಲಿ ಅವನೊಬ್ಬನೇ ಜೀವದಿಂದುಳಿದವನು. ಉಳಿದವರೆಲ್ಲರೂ ಮಡಿದರು. ಅವನು ಭಯಂಕರವಾದ ಸುದ್ದಿಯನ್ನು ಹೇಳಿದನು. ಜೀವದ ಆಶೆ ಇದ್ದರೆ ನಾವು ಓಡಿ ಹೋಗಲೇಬೇಕು.

**ಸರಲಾ** :-- ಓಡಿ!

**ಗಣಪ** :— ಹೊರಗೆ ಭಯಂಕರ ಗಲಿಬಿಲಿ ಇದೆ. ಸ್ವತಃ ಮಹಾರಾಜರು ಕಾಣದಂತಾಗಿದ್ದಾರೆಂದು........

**ಸರಲಾ** :— ಆದರೆ 'ನನ್ನವರು'....'ಅವರ'ನ್ನು ನೋಡಿದನಂತೇನು?

**ಗಣಪ** :— ಇಲ್ಲ. ಆದರೆ ಎಲ್ಲವೂ ಮುಗಿದಿದೆ, ಸರಲಾ. ಒಂದು ತಾಸಿನಲ್ಲಿ ಯವನರು ಇಲ್ಲಿಗೆ ಬಂದು ಬಿಡುವರು. ಬಾ. ಅವರಿಂದ ಹತನಾಗಲು ನಾನು ಇಚ್ಛಿಸುವದಿಲ್ಲ. (ಅವಳ ಮುಂಗೈ ಹಿಡಿದು ಎಳೆಯುವನು)

**ಸರಲಾ** :— ಅಣ್ಣಾ! ಪತಿಯನ್ನು ಬಿಟ್ಟು ಬರಲಾರೆ.

**ಗಣಪ** :— ಥೂ ಥೂ! ಇಷ್ಟೂ ತಿಳಿಯುವದಿಲ್ಲವೇ? ಹಿಂದುಗಳು ಸೋತರು. ನಾವು ವಿಜಯನಗರಕ್ಕೆ ಓಡಿ ಹೋಗೋಣ.

**ಸರಲಾ** :— ನೀನು ಹೋಗು, ನಾನು ಪತಿಯ ದಾರಿ ನೋಡುತ್ತ ಇಲ್ಲಿಯೇ ಇರುವೆನು. ಉಳಿಯಲಿ, ಸಾಯಲಿ, ಅವರು ನನ್ನಲ್ಲಿಗೆ ಬರಲೇ ಬೇಕು. (ಕೈಬಿಡಿಸಿಕೊಳ್ಳುವಳು)

**ಗಣಪ** :— ಆದರೆ ಇಸ್ಮಾಯಿಲ ಆದಿಲಶಹನು....

(ಸರಲಾಜಿಯು ಕೋಣೆಯೊಳಗೆ ಹೋಗಿ ಬಾಗಿಲನ್ನು ಮುಚ್ಚಿಕೊಳ್ಳುವಳು. ಗಣಪನಾಯಕನು ವಾಕ್ಯವನ್ನು ಪೂರ್ಣ ಮಾಡದೇ ನೋಡುತ್ತ ನಿಲ್ಲುವನು.)

**ಗಣಪ** :— ಹೋಗು ನಿನ್ನ ಗತಿ ನಿನಗೆ. ನಾನು ಪಾರಾಗುವೆನು.

**ಶೈಲಾ** :— (ಕೆಣಕುವ ಧ್ವನಿಯಲ್ಲಿ) ನಾಯಕರೇ!

**ಗಣಪ** :— ನಿಮ್ಮ ಸಂಗಡ ಮಾತಾಡಲು ನನಗೆ ವೇಳೆಯಿಲ್ಲ. (ಅವಳನ್ನು ಅತ್ತ ಸರಿಸುವನು)

**ಶೈಲಾ** :— ನೀವು ಪಾರಾಗಬೇಕಲ್ಲವೇ? ಹೇಗೆ ಹೋಗುವಿರಿ?

**ಗಣಪ** :— ಏಕೆ? ನನ್ನ ರಥವಿದೆಯಲ್ಲ!

**ಶೈಲಾ** :— ಆದರೆ ಕುದುರೆಗಳು?

**ಗಣಪ** :— (ಎಚ್ಚತ್ತಂತಾಗಿ) ಓಹೋ! ಹೌದು, ಎಲ್ಲ ಕುದುರೆಗಳು ರಣಕ್ಕೆ ಹೋಗಿವೆ.

**ಶೈಲಾ** :— ನೀವು ನಡೆಯುತ್ತಲೇ ಹೋಗಬೇಕು.

**ಗಣಪ** :— ನಡೆಯುತ್ತ! ಈ ಜನ್ಮದಲ್ಲಿ ನಾನು ನಡೆದಿಲ್ಲ. ನೂರಾರು ವರಾಹಗಳು ಬಿದ್ದರೂ ಚಿಂತೆ ಇಲ್ಲ. ಕುದುರೆಗಳನ್ನು ಕೊಳ್ಳುವೆನು.

**ಶೈಲಾ** :— ಈಗ, ಇಲ್ಲಿ, ಈ ಪಾಳಯದಲ್ಲಿ ಕುದುರೆಗಳೆಲ್ಲಿ ಸಿಗಬೇಕು! ಮೇಲಾಗಿ ರಾತ್ರೀ ವೇಳೆ. ಕುದುರೆಗಳಿದ್ದರೂ ಬಹಳ ಸ್ವಲ್ಪ ಇರಬೇಕು. ಇವುಗಳನ್ನು ಕೊಳ್ಳುವ ಜನರು ಮಿತಿಮೀರಿದ್ದಾರೆ. ಕಿಮ್ಮತ್ತೂ ಮೇರೆದಪ್ಪಿದೆ.

**ಗಣಪ** :— ಕುದುರೆಗಳಾದರೂ ಇವೆಯೇ?

**ಶೈಲಾ** :— ಆರ್ಯಪುತ್ರರು ಎರಡನ್ನೂ ಬಿಟ್ಟು ಹೋಗಿದ್ದಾರೆ.

 

ಗಣಪ :— ತಿಮ್ಮನಾಯಕರು? ಆಹಾ, ಎಷ್ಟು ದೂರದರ್ಶಿಗಳವರು! ನಾವು ಪಾರಾದೆವು. ಅವು ಎಲ್ಲಿವೆ?

ಶೈಲಾ :— ಲಾಯದಲ್ಲಿವೆ. ಕೀಲಿ ಹಾಕಿದ್ದೇನೆ.

ಗಣಪ :— ಬೇಗ ಬೀಗದ ಕೈ ತರ್‍ರಿ, ಬೇಗ ತನ್ನಿರಿ.

ಶೈಲಾ :— ಕೈ ಸುರಕ್ಷಿತವಾಗಿದೆ ನಾಯಕರೇ,

ಗಣಪ :— ಹಾಗಾದರೆ ಕೊಡಿರಿ, ನಾನೇ ಸ್ವತಃ ಕುದುರೆಗಳನ್ನು ಹೊರಗೆ ತರುವೆನು.

ಶೈಲಾ :— ಈಗ ಒಬ್ಬರು ಕೇಳಿದರು. ಕೊಡಲಿಲ್ಲ.

ಗಣಪ :— ಹೇಗಾದರೂ ನೀವು ನನ್ನ ರಥದಲ್ಲಿಯೇ ಬರುವಿರಿ. ಹೆರವರಿಗೆ ಕೊಡದೇ ಇದ್ದುದು ಒಳ್ಳೇಯದೇ ಆಯಿತು.

ಶೈಲಾ :— ನಾನೇನೂ ಪಾಳಯ ಬಿಡುವದಿಲ್ಲ.

ಗಣಪ :— ಬಿಡುವದಿಲ್ಲ! ಯವನರು ಪಾಳಯದ ಬಾಗಿಲಿಗೆ ಬಂದು ಬಿಟ್ಟರೆ ಬೇಕು.

ಶೈಲಾ :— ಬರಲಿ. ಆದರೂ ನಾನು ಹೋಗುವದಿಲ್ಲ.

ಗಣಪ :— ಓಹೋ, ಅಬಲೆಯರಿಗೆ ಅವರು ದಯೆತೋರುವರೆಂದು ತಿಳಿದಿರುವಿರೇನು. ಅವರು ಮುಸಲ್ಮಾನರು, ಹಿಂದುಗಳಲ್ಲ.

ಶೈಲಾ :— ಇರವಲ್ಲರೇಕೆ!

ಗಣಪ :— ಶೈಲಾಜಿಯವರೇ, ನಿರ್ದಯರೂ, ಪಶುಸಮಾನರೂ ಆದ ಯವನರು ಇಲ್ಲಿ ಬಂದರೆ ನೀವು ಕ್ಷೇಮದಿಂದ ಉಳಿಯುವಿರೆಂಬ ಕಲ್ಪನೆ ಇದೆ ಏನು?

ಶೈಲಾ :— ಏಕೆ ಗಣಪನಾಯಕರೇ, ನನ್ನನ್ನು ಹೆದರಿಸಿ ನೋಡುವಿರೇನು? ನಾನು ಹುಟ್ಟಿದ್ದು ವಿಜಾಪುರದಲ್ಲಿ. ಮುಸಲ್ಮಾನ ತರುಣಿಯರಿಗಿಂತಲೂ ಉರ್ದು ಸ್ಪಷ್ಟವಾಗಿ ಆಡಬಲ್ಲೆ. ಅವರಂತೆ ಪೋಷಾಕನ್ನೂ ಧರಿಸಬಲ್ಲೆ.

ಗಣಪ :— ಹೀಗೇನು?

ಶೈಲಾ :— (ಉರ್ದು ಸ್ವರದಲ್ಲಿ) ಹಾಗೆಯೇ!

ಗಣಪ :— ನೀವು ಯವನಳಂತೆ ನಡೆಯನ್ನು ಮಾಡುವಿರಿ.

ಶೈಲಾ :— (ಸಾತ್ವಿಕ ಧ್ವನಿಯಲ್ಲಿ) ದೇವರೇ ಕಾಪಾಡಿದ. ನನ್ನ ಈಗಿನ ಉಡುಪೂ ಮುಸಲ್ಮಾನ ಯುವತಿಯ ಉಡುಪಿಗೆ ತುಸು ಹೋಲುತ್ತಿದೆ

ಗಣಪ :— ಕುದುರೆಗಳನ್ನು.... ನನಗೆ....

ಶೈಲಾ :— ೧೦೦೦ ವರಾಹಕ್ಕಿಂತ ಕಡಿಮೆಗೆ ಮಾರಲೇ ಬಾರದೆಂದು ನನ್ನ ಪತಿರಾಯರು ರಣಕ್ಕೆ ಹೋಗುವಾಗ ಆಜ್ಞಾಪಿಸಿ ಹೋದರು.

ಗಣಪ :— ಅಂದರೆ ನೀವು ಅವುಗಳನ್ನು ಮಾರುವಿರೇನು?

ಶೈಲಾ :— ಏಕೆ? ಇಷ್ಟೇಕೆ ನಿಮಗೆ ಆಶ್ಚರ್ಯವಾಯಿತು? ಹೌದು.

ಗಣಪ :— ಛೆ, ಛೆ, ಆದೇನಿಲ್ಲ.... ಆದರೆ ಕಿಮ್ಮತ್ತು ಬಹಳ ಹೇಳುವಿರಿ.

ಶೈಲಾ :— ಪತಿಯ ಆಜ್ಞೆ.

(ಗಣಪನಾಯಕನು ನಿರಾಶೆಯಿಂದ ಕೈತಿರುವುವನು. ಲೋಡಿಗಾತು ಕುಸಿ ಬೀಳುವನು. ಶೈಲಾಜೆಯು ಕಿಡಿಕೆಯ ಕಡೆಗೆ ಓಡುವಳು.)

ಶೈಲಾ :— ಬೀದಿಯಲ್ಲಿ ಏನೋ ಗಲಿಬಿಲಿ ಇದೆ.

ಗಣಪ :— ಏನದು ?

ಶೈಲಾ :— ಜನರು ದಿಕ್ಕಾಪಾಲಾಗಿ ಓಡಿ ಹೋಗುತ್ತಿದ್ದಾರೆ. ಇಸ್ಮಾಯಿಲ ಶಹನ ಕ್ರೌರ್ಯದಿಂದ ತಪ್ಪಿಸಿಕೊಳ್ಳಲು ಚಲ್ಲಾಪಿಲ್ಲಿಯಾಗಿದ್ದಾರೆ.

ಗಣಪ :— (ಗುಣುಗುಟ್ಟುವನು) ೧೦೦೦ ವರಾಹ.

ಶೈಲಾ :— ನಿಮ್ಮ ಹಮ್ಮಿಣಿಯಲ್ಲಿರಬಹುದು. ನಿಜ. ಇಂಥ ಪರಿಸ್ಥಿತಿಯಲ್ಲಿ ನಮ್ಮ ಆಸ್ತಿಯನ್ನೆಲ್ಲ ಶಕ್ಯವಿದ್ದಷ್ಟು ನಾವೇ ಸ್ವತಃ ಒಯ್ಯಬೇಕು.

ಗಣಪ :— ಶೈಲಾಜ, ನನ್ನಲ್ಲಿ ನಿಮ್ಮದೇನಾದರೂ ಆದರ ಭಾವನೆ ಇದ್ದರೆ....

ಶೈಲಾ :— ಬೀದಿಯ ಗದ್ದಲವು ಹಸಗೆಟ್ಟಿತು. ಅಯ್ಯೋ ಇದೇನು? ಇದು ಯವನರ ಉಡುಪೇನು ?

ಗಣಪ :— (ಕಿಡಿಕೆಗೆ ಹೋಗುತ್ತ, ಹೋಗದೇ) ಯವನರು!

ಶೈಲಾ :— (ಕಿಡಿಕೆಯಿಂದ ನಗುತ್ತಾ ಬಂದು) ಅಯ್ಯೋ ದೈವವೇ ನಾನು

ಗಣಪ :— (ಶೈಲಾಜೆಯ ಎದುರು ಬಂದು) ಕುದುರೆಗಳು.... ಕುದುರೆಗಳು ನನಗೆ ಬೇಕು. ಲಾಯದ ಬೀಗದ ಕೈ ತನ್ನಿರಿ.

**ಶೈಲಾ** :— ೧೦೦೦ ಕ್ಕಾದರೆ ಕೊಡುವೆನು.

**ಗಣಪ** :— ಶೈಲಾಜಿಯವರೇ, ತೊಂದರೆ ಕೊಡಬೇಡಿರಿ, ೧೦೦೦ ಕೊಡುವೆನು. ವೇಳೆ ಇಲ್ಲ. ಹುಂ. ( ಟೊಂಕದಲ್ಲಿಯ ಹಮ್ಮಿಣಿಯನ್ನು ಬಿಚ್ಚಿ ಮುಂದಿಟ್ಟು ) ಶೈಲಾಜಿ, ಇಗೋ ಈ ೧೦೦೦ ವರಾಹ ತೆಗೆದುಕೊಳ್ಳಿರಿ. ಶಿರಗೊಡ್ಡಿ ಬೇಡಿಕೊಳ್ಳುವೆನು. ಕೀಲಿ-ಕೈ ತನ್ನಿರಿ. ( ಮೊಣಕಾಲೂರಿ ಭಿಕ್ಷೆಗೆ ನಿಂತವನಂತೆ ನಿಲ್ಲುವನು )

( ಬಾಗಿಲು ತೆರೆಯಲ್ಪಡುವದು. ದೇಹವೆಲ್ಲವೂ ಹೊಲಸಾದ ತಿಮ್ಮನಾಯಕನು ಬರುವನು. ಗಣಪನಾಯಕನಿಗೆ ಕಾಣದಂತೆ ತಿಮ್ಮನಾಯಕನಿಗೆ ಹೊರಟು ಹೋಗಲು ಶೈಲಾಜಿಯು ಕೈಸನ್ನೆ ಮಾಡುವಳು. ಅವನು ಬಾಗಿಲನ್ನು ಮುಚ್ಚಿಕೊಂಡು ಹೋಗುವನು. )

**ಗಣಪ** : — ಯಾರವರು ?

**ಶೈಲಾ** :— ಅವರೇ ? ಮತ್ತೊಂದು ಗಿರಾಕಿ. ನನ್ನಲ್ಲಿ ಕುದುರೆಗಳಿವೆಯೆಂದು ಅವರಿಗೂ ಗೊತ್ತಿದೆ. ಒಳಗೆ ಕರೆಯಲೇನು ಬೇಕಾದರೆ ?

**ಗಣಪ** :— ಛೇ, ಬೇಡ. ದಯಮಾಡಿ ಕರೆಯಬೇಡಿರಿ.

**ಶೈಲಾ** :— ( ಗಣಪನಾಯಕನು ಮೊಣಕಾಲೂರಿರುವಾಗಲೇ ಅವನ ಕಂಠಿಯನ್ನು ತೆಗೆದುಕೊಳ್ಳುವಳು. ) ಇದೂ ನನಗೆ ಬೇಕು.

**ಗಣಪ** :— ( ಗುಣಗುಡುತ್ತ ) ಅದು ವಜ್ರದ್ದು. ಅದರ ಕಿಮ್ಮತ್ತು ......

**ಶೈಲಾ** :— ಒಳ್ಳೇ ಗಿರಾಕಿ ಕೂಡಿದಿರಿ ನೀವು. ಹೊರಗಿದ್ದವರನ್ನು ಕರೆಯಲೇನು ?

**ಗಣಪ** :— ಬೇಡ, ಬೇಡ. ಇರಲಿ....ಕೀಲಿ-ಕೈ ತನ್ನಿರಿ.

**ಶೈಲಾ** :— ( ಸ್ತನದ ಸಂದಿಯಿಂದ ಕೀಲಿಕೈ ತೆಗೆದು ಕೊಡುವಳು ) ತೆಗೆದುಕೊಳ್ಳಿರಿ.

**ಗಣಪ** :— ಆ....ಹಾ...( ಅವನ್ನು ಕಸಿದುಕೊಂಡು ಬಾಗಿಲಿಗೆ ಓಡುವನು. ಬಾಗಿಲವನ್ನು ತೆರೆದು ಗಾಬರಿಯಾಗಿ ಹಿಂದೆ ಸರಿಯುವನು. ) ಎಪ್ರೈನರಿಯೋ.

**ಶೈಲಾ** :— ( ನಗುತ್ತ ) ಯುದ್ಧದ ವೇಳೆಯಲ್ಲಿ ಮಾಡಿದ್ದೆಲ್ಲವೂ ನ್ಯಾಯವೇ!

**ಗಣಪ** :— ಹೀಗೇನು. ಒಳ್ಳೇದು. ನನ್ನ ದುಡ್ಡನ್ನು ಬಲಾತ್ಕಾರದಿಂದ ಕಸಿದುಕೊಳ್ಳುವೆನು. ಏನು ಮಾಡುತ್ತೀರಿ ಮಾಡಿರಿ ( ಅವಳ ಸನಿಯಕ್ಕೆ ಹೋಗುವನು. )

**ಶೈಲಾ** :— (ಗಟ್ಟಿಯಾಗಿ ಕೂಗುವಳು) ಆರ್ಯಪುತ್ರಾ (ತಿಮ್ಮನಾಯಕನು ಬರುವನು)

**ಗಣಪ** :— ದಲವಾಯಿ ತಿಮ್ಮನಾಯಕರೇ,

**ತಿಮ್ಮ** :— ನಾನೀಗ ದಂಡನಾಯಕ, ರಣಭೂಮಿಯಲ್ಲಿರುವಾಗಲೇ ನನಗೆ ಬಡ್ತಿಯಾಯಿತು.

**ಗಣಪ** :— ಅಂದರೆ ಹಿಂದುಗಳು ಜಯಶೀಲರಾದರು! ಆದರೆ ನಾನು ಕೇಳಿದ್ದು............

**ತಿಮ್ಮ** :— ಮಹಾರಾಜರ ಅಂಗರಕ್ಷಕನಾಗಿ ನಾನು ಹೋರಾಡಿದೆ ನಮ್ಮ ಸಮಸ್ತ ಸೇನೆಯಿಂದ ಯವನರ ಸೇನೆಯನ್ನು ಮುತ್ತಿ ಅವರನ್ನು ಜರ್ಜರಿತರನ್ನಾಗಿ ಮಾಡಿ ಓಡಿಸಿಬಿಟ್ಟೆವು. ಯವನ ಸೇನೆಯು ಕೃಷ್ಣಾ ನದಿಯನ್ನು ಹಾರಿ ಜೀವ ಉಳಿಸಿಕೊಳ್ಳಲು ಪ್ರಯತ್ನ ಪಟ್ಟಿತು. ಪ್ರತ್ಯಕ್ಷವಾಗಿ ಯುದ್ಧದಲ್ಲಿ ಭಾಗ ವಹಿಸದೆ ದೂರದಲ್ಲಿ ನೋಡುತ್ತ ನಿಂತಿದ್ದ ಇಸ್ಮಾಯಿಲ ಆದಿಲಶಹನು ತನ್ನ ಅಂಗ ರಕ್ಷಕನಾದ ಅಸದಖಾನನ ಉಪದೇಶದ ಮೇರೆಗೆ ಆನೆಯ ಮೇಲೆ ಪಲಾಯನ ಮಾಡಿದನು. ಆಗ ಮಹಾರಾಜರು "ಈಗ ಯವನನಿಗೆ ಆದ ಪ್ರಾಯಶ್ಚಿತ್ತವು ಸಾಕಷ್ಟಿದೆ. ಮುಂದಿನ ರಾಯಚೂರ ಮುತ್ತಿಗೆಗೆ ಸಿದ್ಧರಾಗಿರಿ." ಎಂದು ಹುರಿದುಂಬಿಸಿದರು. ಈಗ ಕೆಲ ದಿನಗಳ ಮಟ್ಟಿಗೆ ಇಡೀ ಸೈನ್ಯಕ್ಕೆ ಬಿಡುವು ಕೊಟ್ಟಿದ್ದಾರೆ.

**ಶೈಲಾ** :— ಜಯಶೀಲರಾಗಿ ಬಂದ ಆರ್ಯಪುತ್ರರನ್ನು ಕಂಡ ಈ ಕಣ್ಣುಗಳೇ ಧನ್ಯವು. (ಕೊರಳಲ್ಲಿ ಮಾಲೆಯನ್ನು ಹಾಕಿ ಅವನ ಹಣೆಗೆ ತಿಲಕವನ್ನು ಇಡುವಳು; ಆರತಿಯನ್ನು ತಂದು ಬೆಳಗುವಳು.)

**ತಿಮ್ಮ** :— ಆದರೆ ಗಣಪನಾಯಕರು ಮಾತ್ರ, ನಾವು ಸೈನಿಕರು ಮನೆ ಬಿಟ್ಟು ಹೋಗಿರುವಾಗ (ಬೂಟಾಟಿಕೆಯ ಸ್ವರದಲ್ಲಿ) ನನ್ನ ಹೆಂಡತಿಯ ಮೈಮೇಲೆ ಹೋದರೇ........

**ಗಣಪ** :— ಛೇ ಛೇ! ಹಾಗೆಂದಿಗೂ ಇಲ್ಲ. ಎಲ್ಲವನ್ನೂ ನಿಮಗೆ ಹೇಳುವೆನು

**ತಿಮ್ಮ** :— ಸುಮ್ಮನೆ ಹೊರಗೆ ಹೋಗಿರಿ. ಹೊಡೆತ ಬಿದ್ದಾವು

**ಗಣಪ** :— ಆದರೆ (ತಿಮ್ಮನಾಯಕನನು ಹೊರಟುಹೋಗಲು ಸೂಚಿಸುವಂತೆ ಕೈ ಮಾಡುವನು. ಗಣಪನಾಯಕನು ಹೋಗುವನು.)

**ಶೈಲಾ** :— ನಾವು ಮಾತಾಡುವದು ನಿಮಗೆ ಕೇಳಿಸಿತೇನು?

**ತಿಮ್ಮ** :— (ನಗುತ್ತ) ಕೇಳಿಸದೇ ಏನು! (ಶೈಲಾಜಿಯನ್ನು ಮುಂದಕ್ಕೆಳೆದು ತನ್ನ ಕೊರಳೊಳಗಿನ ಮಾಲೆಯನ್ನು ಅವಳ ಕೊರಳಲ್ಲಿರಿಸಿ ಎದೆಗವಚಿಕೊಂಡು) ಪ್ರಿಯೆ, ಇಂದು ನಾನು ನಿಜವಾಗಿಯೂ ಸುಖಿಯು.

**ಶೈಲಾ** :— ನಾವು ಬಡವರು. ಬದುಕಬೇಕು. ಇಲ್ಲಿ ನೋಡಿರಿ. (ವರಹಗಳನ್ನೂ ಕಂಠಿಯನ್ನೂ ತೋರಿಸುವಳು.)

**ತಿಮ್ಮ** :— ಏನು? ಸುಮಾರು ೧೦೦೦ ವರಹ, ಮೇಲೊಂದು ಕಂಠಿ.... ...

**ಶೈಲಾ** :— ಗಣಪನಾಯಕನಿಗೆ ಯವನರಿಂದ ಪಾರಾಗಬೇಕಾಗಿದೆಯಂತೆ. ಆದುದರಿಂದ ೧೦೦೦ ವರಹಗಳನ್ನು ಕೊಟ್ಟು ನಿಮ್ಮ ಈ ಎರಡು ಕುದುರೆಗಳನ್ನು ಕೊಂಡಿದ್ದಾನೆ. ಈ ಕಂಠಿಯನ್ನು ಇನಾಮೆಂದು ನಾನೇ ಅವನಿಂದ ಕಿತ್ತುಕೊಂಡಿದ್ದೇನೆ.

**ತಿಮ್ಮ** :— ಓ, ಶೈಲಾ, ನಿನ್ನ ಯೋಗ್ಯತೆ ಯಾರಿಗೂ ಬಾರದು. ನಾಳೆ ಈ ದುಡ್ಡಿನಿಂದ ವಿಜಯನಗರದಲ್ಲಿ ಮೋಜು ಮಾಡೋಣ.

(ಗಣಪನಾಯಕನು ಬಾಗಿಲನ್ನು ತೆರೆಯುವನು. ಒಳಗೆ ಬಾರದೆ—)

**ಗಣಪ** :— ಶೈಲಾಜೀ, ನೀನು ಮನೆತನದ ಹೆಂಗಸಿನಂತೆ ನಡೆದುಕೊಳ್ಳಲಿಲ್ಲ. ಕಠೋರಳು.

ಶೈಲಾಜಿ ಮತ್ತು ತಿಮ್ಮನಾಯಕರು ಅವನ ಮಾತಿಗೆ ಬಿದ್ದು ಬಿದ್ದು ನಗುತ್ತಿರುವಾಗಲೇ

**ತೆರೆ**

—ಕಲಮದಾನಿ ಗುರುರಾಜರಾವ
ಹುಬ್ಬಳ್ಳಿ

---

# ಲಲಿತ ಸಾಹಿತ್ಯ ಮಾಲೆ, ಧಾರವಾಡ

ವರುಷಕ್ಕೆ ಆರುನೂರು ಪುಟದ ಸಾಹಿತ್ಯ

**ಚಂದಾ : ೫ ರೂ. ರಜಿಸ್ಟರ ಅಂಚೆಯಿಂದ ೬ ರೂ.**

ಇದುವರೆಗಿನ ಪ್ರಕಟನೆಗಳು

## ಮೊದಲನೆಯ ವರುಷ

| | | |
|---|---|---|
| ಚಿಗುರು | ಬಿ. ಸೌ. ಗೌರಮ್ಮ | ತೀರಿವೆ |
| ಅಕ್ಕಾಜಿ | ಶರಚ್ಚಂದ್ರ | ೧ ೪ ೦ |
| ಕುಲದೀಪಕರು | ಸಿದ್ಧವನಹಳ್ಳಿ | ತೀರಿವೆ |
| ಸಾಹಿತ್ಯರತ್ನ | ಅ. ನ. ಕೃಷ್ಣರಾಯ | ೩ ೮ ೦ |

## ಎರಡನೆಯ ವರುಷ

| | | |
|---|---|---|
| ಮುದ್ದಿನ ಕಣಿ [ ಚೆಕೊವ್ ] | ಚುಳಕಿ | ೧ ೦ ೦ |
| ಸುಮತಿ ಮತ್ತು ಅನುರಾಧಾ | ಶರಚ್ಚಂದ್ರ | ೧ ೪ ೦ |
| ಡೊಂಕುಬಾಲ | ನಾ. ಕಸ್ತೂರಿ | ೧ ೮ ೦ |
| ಕಸ್ತೂರಿ | ಶ್ರೀಮತಿ 'ವಾಣಿ' | ೧ ೪ ೦ |
| ಶೈಲಾಜಿ | ವಿವಿಧ ಏಕಾಂಕಗಳು | ೧ ೪ ೦ |
| ಇಂದಿನ ಕರ್ನಾಟಕ | ಸಂಪಾದಕರು : ಪ್ರೊ. ಗೋಕಾಕ | ,, |

**ಮನೋಹರ ಗ್ರಂಥಭಾಂಡಾರ, ಧಾರವಾಡ**

**ಕನ್ನಡ ಪುಸ್ತಕಾಲಯ, ಬೆಳಗಾಂವಿ**